ಆದೇಶವಾಗಿರುತ್ತದೆ. ಈ ಬಗ್ಗೆ ವಾಹನವನ್ನು ಮಧ್ಯಂತರ ವಶಕ್ಕೆ ನೀಡುವ ಬಗ್ಗೆ ಆಕ್ಷೇಪಣೆ ವ್ಯಕ್ತಪಡಿಸಿ ಮಾನ್ಯ ನ್ಯಾಯಾಲಯಕ್ಕೆ ದಿನಾಂಕ:16–8–2007 ರಂದು ವರದಿ ಸಲ್ಲಿಸಲಾಯಿತು.

ನಂತರ ಮೊಕದ್ದಮೆಯ ಬಗ್ಗೆ ವಿಚಾರಣೆಗೆ ಹಾಜರಾಗುವಂತೆ ದಿನಾಂಕ:22–11–2007,29–11–2007, 03–01–2008 ರಂದು ದಿನಾಂಕ ನಿಗಧಿಪಡಿಸಲಾಗಿ ದಿನಾಂಕ 3–1–2008 ರಂದು ಅರ್ಜಿದಾರರ ಪರವಾಗಿ ವಕೀಲರು ಹಾಜರಾಗಿರುತ್ತಾರೆ. ದಿನಾಂಕ:07–02–2008 ಹಾಗೂ 28–2–2008 ರಂದು ವಿಚಾರಣೆ ಇರುವುದಾಗಿ ನೊಂದಾಣಿ ಅಂಚೆಯಲ್ಲಿ ನೋಟಿಸು ಜಾರಿ ಮಾಡಲಾಗಿ ಅರ್ಜಿದಾರರು ನೋಟಿಸು ಸ್ವೀಕರಿಸಿರುತ್ತಾರೆ. ದಿನಾಂಕ:28–02–2008 ರಂದು ಅರ್ಜಿದಾರರ ಪರವಾಗಿ ವಕೀಲರು ಹಾಜರಾಗಿರುತ್ತಾರೆ. ದಿನಾಂಕ:29–05–2008 ರಂದು ಸರ್ಕಾರಿ ವಕೀಲರು ಹಾಗೂ ಅರ್ಜಿದಾರರ ಪರ ವಕೀಲರು ಹಾಜರಾಗಿರುತ್ತಾರೆ. ದಿನಾಂಕ:14–08–2008 ರಂದು ಅರ್ಜಿದಾರರು ಅಥವಾ ಅವರ ವಕೀಲರು ವಿಚಾರಣೆಗೆ ಹಾಜರಾಗದ ಕಾರಣ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ರಾಜ್ಯಪತ್ರದಲ್ಲಿ ಪ್ರಕಟಣೆ ಹೊರಡಿಸುವ ಬಗ್ಗೆ ತೀರ್ಮಾನಿಸಲಾಯಿತು.

ಈ ಪ್ರಕರಣದ ಬಗ್ಗೆ ಅರಣ್ಯ ಕಾಯಿದೆ 1963 ರ ಸೆಕ್ಷನ್ 71 ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಬೇಕಾದ ಪ್ರಯುಕ್ತ ಕರ್ನಾಟಕ ಅರಣ್ಯ ಕಾಯ್ದೆ 1963 ರ 71 (ಎ) ಯಿಂದ (ಜಿ)ಯ ಅನ್ವಯ ಉತ್ಪನ್ನಗಳ ಸಾಗಾಣಿಕೆಯ ಹಕ್ಕು ಭಾಧ್ಯತೆ ಹಾಗೂ ವಾಹನದ ಮಾಲೀಕತ್ವದ ರುಜುವಾತುಪಡಿಸುವ ಮೂಲಕ ದಾಖಲಾತಿಗಳನ್ನು ಹಾಜರುಪಡಿಸಲು 30 ದಿನಗಳ ಕಾಲಾವಕಾಶ ನೀಡಿ ವಾಹನದ ಮಾಲೀಕರು ಖುದ್ದಾಗಿ ಅಥವಾ ನ್ಯಾಯಾವಾದಿಗಳ ಮುಖಾಂತರ ಅರ್ಜಿ ಸಲ್ಲಿಸುವಂತೆ, ತಪ್ಪಿದಲ್ಲಿ ಸದರಿ ವಾಹನ ಮತ್ತು ಸೊತ್ತನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಏಕಪಕ್ಷೀಯವಾಗಿ ಕ್ರಮ ಕೈಗೊಳ್ಳಲಾಗುವುದೆಂದು ಈ ನ್ಯಾಯಾಲಯದ ಆದೇಶ ಸಂಖ್ಯೆ ಎಲ್ಎನ್ಡಿ: ಅರಣ್ಯ ಮೊಕದ್ದಮೆಸಂಖ್ಯೆ 101/2006–07 ದಿನಾಂಕ:23–08–2008 ರಂದು ಪ್ರಕಟಣೆ ಹೊರಡಿಸಲಾಗಿತ್ತು. ಸದರಿ ಪ್ರಕಟಣೆಯು ದಿನಾಂಕ:04–09–2008 ರ ಕರ್ನಾಟಕ ರಾಜ್ಯ ಪತ್ರ ಭಾಗ 6(ಎ) ಪುಟ ಸಂಖ್ಯೆ 226 ರಲ್ಲಿ ಪ್ರಕಟಗೊಂಡಿರುತ್ತದೆ.ಸದರಿ ಪ್ರಕಟಣೆಯು ಉದಯವಾಣಿ ದಿನ ಪತ್ರಿಕೆಯಲ್ಲಿ ದಿನಾಂಕ:30–10–2008 ರಲ್ಲಿ ಪ್ರಕಟವಾಗಿರುತ್ತದೆ.

ನಂತರ ದಿನಾಂಕ:23–07–2009 ರಂದು ವಿಚಾರಣೆಗೆ ಹಾಜರಾಗಲು ನೋಟಿಸು ಜಾರಿ ಮಾಡಲಾಗಿ ಯಾರೂ ವಿಚಾರಣೆಗೆ ಹಾಜರಾಗಿರುವುದಿಲ್ಲ.

ಮೇಲಿನ ಪ್ರಕಟಣೆಯಲ್ಲಿ ನೀಡಲಾಗಿದ್ದ 30 ದಿನಗಳ ಕಾಲಾವಕಾಶವು ದಿನಾಂಕ 22–9–2008 ಕ್ಕೆ ಮುಗಿದಿದ್ದು ಸದರಿ ವಾಹನಕ್ಕೆ ಸಂಬಂಧಿಸಿದಂತೆ ಮಾಲೀಕತ್ವದ ಬಗ್ಗೆ ಯಾರಿಂದಲೂ ಯಾವುದೇ ಅಹವಾಲುಗಳ ಸ್ವೀಕೃತವಾಗಿರುವುದಿಲ್ಲ. ಪುನಃ 30 ದಿನಗಳ ಕಾಲಾವಕಾಶವನ್ನು ನೀಡಿ ವಾಹನದ ಮಾಲೀಕರು ಖುದ್ದಾಗಿ ಅಥವಾ ನ್ಯಾಯಾವಾದಿಗಳ ಮುಖಾಂತರ ಸಲ್ಲಿಸತಕ್ಕದ್ದು ತಪ್ಪಿದಲ್ಲಿ ಸದರಿ ವಾಹನ ಮತ್ತು ಸೊತ್ತನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಏಕಪಕ್ಷೀಯವಾಗಿ ಕ್ರಮಕೈಗೊಳ್ಳಲಾಗುವುದೆಂದು ಈ ನ್ಯಾಯಾಲಯದ ಆದೇಶ ಸಂಖ್ಯೆ ಎಲ್ಎನ್ಡಿ: ಅರಣ್ಯ ಮೊಕದ್ದಮೆಸಂಖ್ಯೆ 101/2006–07 ದಿನಾಂಕ 14–9–2009 ರಂದು ಪ್ರಕಟಣೆ ಹೊರಡಿಸಲಾಗಿತ್ತು. ಸದರಿ ಪ್ರಕಟಣೆಯು ದಿನಾಂಕ:01–10–2009 ರ ಕರ್ನಾಟಕ ರಾಜ್ಯ ಪತ್ರ ಭಾಗ 6(ಎ) ಪುಟ ಸಂಖ್ಯೆ 2745 ರಲ್ಲಿ ಪ್ರಕಟಗೊಂಡಿರುತ್ತದೆ. ಹಾಗೂ ಈ ಪ್ರಕಟಣೆಯು ಶಕ್ತಿ ಹಾಗೂ ರಾಷ್ಟ್ರ ಬಂಧು ದಿನ ಪತ್ರಿಕೆಯಲ್ಲಿ ದಿನಾಂಕ:09–10–2009 ರಂದು ಪ್ರಕಟವಾಗಿರುತ್ತದೆ.

ಮೇಲಿನ ಪ್ರಕಟಣೆಯಲ್ಲಿ ನೀಡಲಾಗಿದ್ದ 30 ದಿನಗಳ ಕಾಲಾವಕಾಶವು ದಿನಾಂಕ:14–10–2009 ಕ್ಕೆ ಮುಗಿದಿದ್ದು ಕೊನೆಯದಾಗಿ ದಿನಾಂಕ:28–01–10 ರಂದು ಯಾರು ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ ಹಾಗೂ ಸದರಿ ವಾಹನಕ್ಕೆ ಸಂಬಂಧಿಸಿದಂತೆ ಮಾಲೀಕತ್ವದ ಬಗ್ಗೆ ಯಾರಿಂದಲೂ ಅಹವಾಲುಗಳ ಸ್ವೀಕೃತವಾಗಿರುವುದಿಲ್ಲ. ಆದುದರಿಂದ, ವಾಹನ ಪಿಕ್.ಅಪ್ ಜೀಪು ನೋಂದಣಿ ಸಂಖ್ಯೆ ಕೆ 18–5733 ಮತ್ತು ವಿವಿಧ ಅಳತೆಯ ಬೀಟೆ ಮರದ 6ನಾಟಗಳ ಸೊತ್ತನ್ನು ಅಕ್ರಮವಾಗಿ ಸಾಗಿಸುವಂತಹ ಕಾನೂನು ಬಾಹಿರ ಕೃತ್ಯದಲ್ಲಿ ಭಾಗಿಯಾಗಿರುವುದು ಸಾಭೀತಾಗಿರುತ್ತದೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಸೊತ್ತು ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 80 ರ ಪ್ರಕಾರ ಸರ್ಕಾರದ್ದಾಗಿರುತ್ತದೆ.

ಆದುದರಿಂದ, ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸರ್ಕಾರಿ ಸೊತ್ತಾದ ಬೀಟೆ ಮರದ ನಾಟ ಹಾಗೂ ಅವುಗಳನ್ನು ಅಕ್ರಮವಾಗಿ ಸಾಗಿಸುತ್ತಿದ್ದ ವಾಹನ ಪಿಕ್ಅಪ್ ಜೀಪು ನೊಂದಾಣಿ ಸಂಖ್ಯೆ ಕೆಎ 18–5733 ನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿದ ವಾಸ್ತಾವಾಂಶಗಳ ಅಧಾರದ ಮೇರೆಗೆ ಹೆಚ್.ಸಿ. ಕಾಂತರಾಜು ಭಾ.ಅ.ಸೇ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ವಿರಾಜಪೇಟೆ ವಿಭಾಗ, ವಿರಾಜಪೇಟೆ ಅದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(ಎ) ಯಿಂದ (ಜಿ)ಯವರೆಗೆ ಹಾಗೂ ಈ ವರೆಗಿನ ತಿದ್ದುಪಡಿಯ ಅನುಸಾರ ದತ್ತವಾದ ಅಧಿಕಾರದ ಮೇರೆಗೆ ಸಿದ್ದಾಪುರ ನಗರ ಪೊಲೀಸ್ ಠಾಣೆ,ರವರು ದಾಖಲಿಸಿದ ಮೊಕದ್ದಮೆ ಸಂಖ್ಯೆ 101/2006–07 ದಿನಾಂಕ:18–12–2006 ರಲ್ಲಿ ಸರ್ಕಾರದ ಪರ ಅಮಾನತ್ತು ಪಡಿಸಿದ ಈ ಕೆಳಕಂಡ ವಾಹನ ಮತ್ತು ಸೊತ್ತನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

1) ವಾಹನದ ಮಾದರಿ : ಪಿಕ್‌ಅಪ್ ಜೀಪು
2) ವಾಹನದ ನೊಂದಾಣಿ ಸಂಖ್ಯೆ : ಕೆಎ –18–5733
3) ಇಂಜಿನ್ ಸಂಖ್ಯೆ : ACVIJ 26273
4) ಚಾಸೀಸ್ ಸಂಖ್ಯೆ : MAIRC 4 AC-YIJ 17328
5) ಸ್ವತ್ತು ಸಂಖ್ಯೆ : ಬೀಟೆ ಮರದ ನಾಟ 6 ಸಂಖ್ಯೆ 0.823

ಈ ಆದೇಶವನ್ನು ದಿನಾಂಕ:18–02–2010 ರಂದು ತೆರೆದ ನ್ಯಾಯಾಲಯದಲ್ಲಿ ಉದ್ಘೋಷಿಸಿ ನನ್ನ ಸಹಿ ಮತ್ತು ನ್ಯಾಯಾಲಯದ ಮೊಹರು ಹಾಕಿ ಬಿಡುಗಡೆ ಮಾಡಿರುತ್ತೇನೆ.

ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ 30 ದಿನಗಳ ಒಳಗಾಗಿ ಸಂಬಂಧಿಸಿದವರು ಯಾವುದೇ ಮೇಲ್ಮನವಿಯನ್ನು ಸಲ್ಲಿಸದೆ ಇದ್ದ ಪಕ್ಷದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಅಲ್ಲದೆ ಮೇಲ್ಮನವಿಯ ಅವಧಿ ಮೀರಿದ ಬಳಿಕ ವಾಹನ ಮತ್ತು ಅರಣ್ಯ ಉತ್ಪನ್ನಗಳನ್ನು ಕಾನೂನು ರೀತ್ಯಾ ವಿಲೇ ಮಾಡಲು ಕೂಡ ಆದೇಶಿಸಿದೆ.

**ಹೆಚ್.ಸಿ. ಕಾಂತರಾಜು ಭಾ.ಅ.ಸೇ**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ವಿರಾಜಪೇಟೆ ವಿಭಾಗ, ವಿರಾಜಪೇಟೆ.

ಪಿ.ಆರ್.326

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ವಿರಾಜಪೇಟೆ ವಿಭಾಗ,**
**ಇವರ ನ್ಯಾಯಾಲಯ,, ವಿರಾಜಪೇಟೆ**
**ಸಂಖ್ಯೆ ಎಲ್‌ಎನ್‌ಡಿ ಮೊ:ಸಂಖ್ಯೆ 54/2002–03, ದಿನಾಂಕ:28ನೇ ಜನವರಿ, 2010**

**ಉಪಸ್ಥಿತರು** ಹೆಚ್.ಸಿ. ಕಾಂತರಾಜು ಭಾ.ಅ.ಸೇ.
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ವಿರಾಜಪೇಟೆ ವಿಭಾಗ, ವಿರಾಜಪೇಟೆ.

**ಪಿರ್ಯಾದುದಾರರು** : ಆರಕ್ಷಕ ಉಪ ನಿರೀಕ್ಷಕರು,
ಕುಟ್ಟಾ ಪೊಲೀಸ್ ಠಾಣೆ, ಕುಟ್ಟಾ.

**ಅರ್ಜಿದಾರರು** : ಬಿ.ಬಿ. ಕಾರ್ಯಪ್ಪ
ತಂದೆ ಲೇಟ್ ಬೋಪಯ್ಯ ತೆರಾಲು ಗ್ರಾಮ,
ಬಿರುನಾಣಿ ಅಂಚೆ, ವಿರಾಜಪೇಟೆ.

**ಮೊಕದಮ್ಮೆ** : ಕುಟ್ಟಾ ಪೊಲೀಸ್ ಠಾಣೆ ಮೊ.ಸಂ. 54/02, ದಿನಾಂಕ:19–11–2002

**ಪ್ರಸ್ಥಾವನೆ:**

ಆರಕ್ಷಕ ಉಪ ನಿರೀಕ್ಷಕರು ಕುಟ್ಟಾ ಪೊಲೀಸ್ ಠಾಣೆ ಕುಟ್ಟಾ ಹಾಗೂ ಸಿಬ್ಬಂದಿ ವರ್ಗದವರು ದಿನಾಂಕ:19–11–2002 ರಂದು ಅಕ್ರಮವಾಗಿ ಬೀಟೆ ಮರದ ಸೈಜುಗಳನ್ನು ಟಾಟಾ 709 ಲಾರಿ ನೊಂದಾಣಿ ಸಂಖ್ಯೆ ಕೆಎ–12–3652ರಲ್ಲಿ ಕಳ್ಳ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಹಚ್ಚಿ 1969ರ ಕರ್ನಾಟಕ ಅರಣ್ಯ ಕಾಯ್ದೆ 71(ಎ) ಮತ್ತು 1963 ರ ಕರ್ನಾಟಕ ಅರಣ್ಯ ಕಾನೂನು ನಿಯಮ 127,144,130,165 ಪ್ರಕಾರ ಮೊಕದ್ದಮೆ ಸಂಖ್ಯೆ 54/2002 ನ್ನು ದಾಖಲು ಮಾಡಿಕೊಂಡು ವಾಹನ ಮತ್ತು ಸ್ವತ್ತನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ವಿರಾಜಪೇಟೆರವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ವಾಹನವನ್ನು ವಲಯ ಅರಣ್ಯ ಅಧಿಕಾರಿ ತಿತಿಮತಿರವರಿಗೆ ಹಾಗೂ ವಿವಿಧ ಅಳತೆಯ ಬೀಟೆ 37 ಸೈಜುಗಳನ್ನು ವಲಯ ಅರಣ್ಯ ಅಧಿಕಾರಿ ತಿತಿಮತಿ ನಾಟಾ ಸಂಗ್ರಹಾಲಯದಲ್ಲಿ ನ್ಯಾಯಾಂಗ ಅಭಿರಕ್ಷೆಯಲ್ಲಿಡಲು ಆದೇಶಿಸಲಾಯಿತು.

ವಾಹನದ ಮಾಲೀಕರಾದ ಶ್ರೀ.ಬಿ.ಬಿ. ಕಾರ್ಯಪ್ಪ ತೆರಾಲು ಗ್ರಾಮ ಬಿರುನಾಣಿ ಅಂಚೆ, ವಿರಾಜಪೇಟೆ ತಾಲ್ಲೂಕು ರವರು ದಿನಾಂಕ:11-12-2002 ರಂದು ಅರ್ಜಿ ಸಲ್ಲಿಸಿ ವಾಹನವನ್ನು ಮಧ್ಯಂತರ ವಶಕ್ಕೆ ನೀಡುವಂತೆ ಕೋರಿರುತ್ತಾರೆ.

ಈ ಬಗ್ಗೆ ಪರಿಶೀಲಿಸಲಾಗಿ ದಿನಾಂಕ:9-11-2001 ರಂದು ಪೊನ್ನಂಪೇಟೆ ವೃಕ್ಷ ಘಟಕದ ಅರಣ್ಯ ವಲಯ ಅಧಿಕಾರಿ ಹಾಗೂ ಸಿಬ್ಬಂದಿಯವರು ಅಕ್ರಮ ಬೀಟೆ ನಾಟಾ=3-1.621 ಘ.ಮೀ ಕಳ್ಳ ಸಾಗಾಣಿಕೆ ಸಂಬಂಧ ಲಾರಿ ಸಂಖ್ಯೆ ಕೆಎ 12 3652 ನ್ನು ಅಮಾನತ್ತುಪಡಿಸಿ ಮೊಕದ್ದಮೆ ಸಂಖ್ಯೆ 52/01-02 ನ್ನು ದಾಖಲಿಸಿ ವಾಹನ ಮತ್ತು ಸೊತ್ತನ್ನು ಕರ್ನಾಟಕ ಅರಣ್ಯ ಕಾಯ್ದೆ 1963 ರ 71 (ಎ) ಯಿಂದ (ಜಿ)ಯ ಪ್ರಕಾರ ಕ್ರಮ ಕೈಗೊಳ್ಳದ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ ವಿರಾಜಪೇಟೆರವರ ಸಮಕ್ಷಮ ಹಾಜರುಪಡಿಸಿದ್ದು, ಸದ್ರಿ ವಾಹನ ಮತ್ತು ಸೊತ್ತನ್ನು ನ್ಯಾಯಾಂಗ ಅಭಿರಕ್ಷೆಗಾಗಿ ವಲಯ ಅರಣ್ಯ ಅಧಿಕಾರಿ ಪೊನ್ನಂಪೇಟೆರವರ ಸುಪರ್ಧಿಗೆ ನೀಡಲಾಗಿತ್ತು.

ಈ ಪ್ರಕರಣವು ತನಿಖಾ ಹಂತದಲ್ಲಿದ್ದು ಸೊತ್ತಿ ನ ಒಡೆತನದ ಬಗ್ಗೆ ತನಿಖೆ ಬಾಕಿ ಇರುವುದರಿಂದ ದಿನಾಂಕ:21-02-2002 ರಂದು ಅರ್ಜಿದಾರರ ಪರ ಅವರ ವಕೀಲರು ವಾದಿಸಿದ ಕೆಲವು ವಾಸ್ತವಾಂಶಗಳನ್ನು ವಿಶ್ಲೇಷಿಸಿ ಅಮಾನತ್ತುಪಡಿಸಿದ ಸದ್ರಿ ವಾಹನವನ್ನು ಕೆಲವು ಷರತ್ತಿಗೆ ಒಳಪಟ್ಟು ರೂ 1,25,000-00 ಬ್ಯಾಂಕ್ ಗ್ಯಾರಂಟಿ ಪಡೆದು ಅರ್ಜಿದಾರರಾದ ಶ್ರೀ ಬಿ.ಬಿ. ಕಾರ್ಯಪ್ಪ ತೆರಾಲು ಗ್ರಾಮ ಬಿರುನಾಣಿ ಅಂಚೆ ವಿರಾಜಪೇಟೆ ತಾಲ್ಲೂಕುರವರಿಗೆ ಈ ನ್ಯಾಯಾಲಯದ ಆದೇಶ ಸಂಖ್ಯೆ 52/01-02 ದಿನಾಂಕ:05-03-2002 ರಂದು ಮಧ್ಯಂತರ ವಶಕ್ಕೆ ನೀಡಲಾಗಿತ್ತು.

ವಾಹನದ ಮಾಲೀಕರು ಈ ನ್ಯಾಯಾಲಯದ ಆದೇಶ ದಿನಾಂಕ:05-03-2002 ರಂತೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲಾಗಿರುವ ವಾಹನ ಕೆಎ12-3652ನ್ನು ಪುನಃ ಅಕ್ರಮ ಬೀಟೆ ಕಳ್ಳಸಾಗಾಣಿಕೆಯಲ್ಲಿ ತೊಡಗಿಸಿದ್ದು ಕುಟ್ಟಾ ಆರಕ್ಷಕ ಠಾಣೆಯಲ್ಲಿ ಮೊಕದ್ದಮೆ ದಾಖಲಾಗಿರುವುದರಿಂದ ಲಾರಿ ಸಂಖ್ಯೆ ಕೆಎ12-3652 ರಲ್ಲಿ ಅಕ್ರಮ ಸಾಗಾಟ ಮಾಡಲಾದ ಸೊತ್ತಿನ ಬಗ್ಗೆ ವಿವರಣೆ ನೀಡುವಂತೆ ದಿನಾಂಕ:27-12-2002 ರಂದು ಈ ನ್ಯಾಯಾಲಯದಿಂದ ಶೊಕಾಸ್ ನೋಟಿಸು ಜಾರಿ ಮಾಡಲಾಗಿತ್ತು. ಅರ್ಜಿದಾರರು ನೋಟಿಸನ್ನು ಸ್ವೀಕರಿಸಿ ಯಾವುದೇ ಉತ್ತರವನ್ನು ನೀಡಿರುವುದಿಲ್ಲ.

ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ತಿತಿಮತಿ ಉಪ ವಿಭಾಗ ತಿತಿಮತಿರವರು ತನಿಖೆ ನಡೆಸಿ ನೀಡಿದ ತನಿಖಾ ವರದಿಯಲ್ಲಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸೊತ್ತುಗಳು ಖಾಸಗಿಯವರದಾಗಿರದೆ ಸರ್ಕಾರಕ್ಕೆ ಸೇರಿದ ಸೊತ್ತಾಗಿದೆ ಎಂದು ವರದಿ ಮಾಡಿರುತ್ತಾರೆ. ಅರ್ಜಿದಾರರು ಈ ನ್ಯಾಯಾಲಯದಿಂದ ದಿನಾಂಕ:26-5-03 ರಂದು ನೀಡಲಾದ ಶೋಕಾಸ್ ನೋಟಿಸಿಗೂ ಉತ್ತರಿಸದ ಕಾರಣ ಅರ್ಜಿದಾರರು ತಪ್ಪನ್ನು ಒಪ್ಪಿಕೊಂಡಂತೆ ಆಗಿರುತ್ತದೆ.

ಅರ್ಜಿದಾರರಾದಂತಹ ಶ್ರೀ ಬಿ.ಬಿ. ಕಾರ್ಯಪ್ಪ ತೆರಾಲು ಗ್ರಾಮ ಬಿರುನಾಣಿ ಅಂಚೆ ವಿರಾಜಪೇಟೆ ತಾಲ್ಲೂಕು ರವರಿಗೆ ಈ ನ್ಯಾಯಾಲಯದ ಆದೇಶ ಸಂಖ್ಯೆ 52/01-2002 ದಿನಾಂಕ:05-03-2002 ರಲ್ಲಿ ಕೆಲವು ಷರತ್ತುಗಳಿಗೆ ಒಳಪಡಿಸಿ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿದ್ದು ವಾಹನವನ್ನು ಪುನಃ ಅಕ್ರಮ ಬೀಟೆ ಸೈಜುಗಳ ಸಾಗಾಣಿಕೆಗೆ ಬಳಸಿದ್ದು ಅರ್ಜಿದಾರರು ಅಪರಾಧ ಮಾಡುವ ಪ್ರವೃತ್ತಿಯನ್ನು ಮೈಗೂಡಿಸಿಕೊಂಡಿದ್ದಾರೆಂಬುದು ಸಾಭೀತಾದ ಕಾರಣ ವಾಹನದ ಮಾಲೀಕರು ಮಧ್ಯಂತರ ವಶಕ್ಕೆ ನೀಡುವಾಗ ವಿಧಿಸಿದ ಷರತ್ತುಗಳನ್ನು ಸಂಪೂರ್ಣವಾಗಿ ಉಲ್ಲಂಘಿಸಿರುವುದು ಸಾಭೀತಾದ್ದರಿಂದ ಅರಣ್ಯ ಮೊಕದ್ದಮೆ ಸಂಖ್ಯೆ 52/2001-02 ರಲ್ಲಿ ವಶಪಡಿಸಿಕೊಂಡ ವಾಹನ ಲಾರಿ ಕೆಎ 12-3652 ಮತ್ತು ಸೊತ್ತು ಬೀಟೆ ನಾಟಾ 6 ಸಂಖ್ಯೆ 3.016 ಘ.ಮೀನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ದಿನಾಂಕ:26-02-2003 ರಲ್ಲಿ ಆದೇಶ ಹೊರಡಿಸಲಾಗಿರುತ್ತದೆ.

ಅರಣ್ಯ ಮೊಕದ್ದಮೆ ಸಂಖ್ಯೆ 52/2001-02 ದಿನಾಂಕ:26-6-2003 ರಲ್ಲಿ ಹೊರಡಿಸಲಾದ ಮುಟ್ಟುಗೋಲು ಆದೇಶವನ್ನು ಪ್ರಶ್ನಿಸಿ ಶ್ರೀ ಬಿ.ಬಿ. ಕಾರ್ಯಪ್ಪರವರು ಸೆಷನ್ ನ್ಯಾಯಾಲಯ ಮಡಿಕೇರಿಯಲ್ಲಿ ಕ್ರಿಮಿನಲ್ ಅಫೀಲು ಸಂಖ್ಯೆ 68/03ನ್ನು ದಾಖಲಿಸಿರುತ್ತಾರೆ.ಈ ಬಗ್ಗೆ ವಿಚಾರಣೆ ನಡೆದು ಮಾನ್ಯ ನ್ಯಾಯಾಲಯವು ದಿನಾಂಕ:30-1-2004 ರಂದು ತೀರ್ಪು ನೀಡಿ ರೂ 30,000-00 ಬ್ಯಾಂಕ್ ಗ್ಯಾರಂಟಿ ಪಡೆದು ವಾಹನವನ್ನು ಮಧ್ಯಂತರ ವಶಕ್ಕೆ ನೀಡಲು ಆದೇಶಿಸಲಾಗಿರುತ್ತದೆ.

ಮಾನ್ಯ ನ್ಯಾಯಾಲಯದ ಆದೇಶದಂತೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ವಾಹನ ಲಾರಿ ಸಂಖ್ಯೆ ಕೆಎ 12 3652 ನ್ನು ಷರತ್ತುಗೊಳಪಟ್ಟು ರೂ 30,000-00 ಬ್ಯಾಂಕ್ ಗ್ಯಾರಂಟಿ ಪಡೆದು ಮಧ್ಯಂತರ ವಶಕ್ಕೆ ದಿನಾಂಕ:12-11-2003 ರಂದು ಬಿಡುಗಡೆಗೊಳಿಸಲಾಯಿತು.

ಪ್ರಕರಣವನ್ನು ಅಂತಿಮವಾಗಿ ಇತ್ಯರ್ಥಪಡಿಸುವ ಸಲುವಾಗಿ ವಿಚಾರಣೆಯನ್ನು ಈ ಅಧಿಕೃತ ನ್ಯಾಯಾಲಯದಲ್ಲಿ ದಿನಾಂಕ:11–09–2003, 9–10–2003 ರಂದು ಕರೆಯಲಾಯಿತು. ದಿನಾಂಕ:09–10–2003 ಸಾಕ್ಷಿದಾರರು ಇರಲಿಲ್ಲ. ಸಹಾಯಕ ಸರ್ಕಾರಿ ಅಭಿಯೋಜಕರು ಹಾಜರಿದ್ದರು. ದಿನಾಂಕ:02–11–2007 ರಂದು ವಿಚಾರಣೆ ಕರೆಯಲಾಗಿ ದಿನಾಂಕ:06–12–2007ರಂದು ಸಾಕ್ಷಿದಾರರಿಗೆ ಹಾಜರಾಗಲು ಅಂತಿಮ ನೋಟಿಸು ಜಾರಿ ಮಾಡಲಾಯಿತು. ದಿನಾಂಕ:27–12–2007 ರಂದು ಸಹಾಯಕ ಸರ್ಕಾರಿ ಅಭಿಯೋಜಕರು, ಅರ್ಜಿದಾರರ ವಕೀಲರು ಹಾಜರಿದ್ದು, ವಾಹನವನ್ನು ಮುಂದಿನ ವಿಚಾರಣೆ ದಿನಾಂಕದಲ್ಲಿ ಹಾಜರುಪಡಿಸುವುದಾಗಿ ವಕೀಲರು ತಿಳಿಸಿರುತ್ತಾರೆ. ದಿನಾಂಕ:28–02–2008 ರಂದು ವಿಚಾರಣೆಗೆ ಕರೆಯಲಾಗಿ ಅರ್ಜಿದಾರರ ಪರ ವಕೀಲರು ಬ್ಯಾಂಕ್ ಗ್ಯಾರಂಟಿಯನ್ನು ನವೀಕರಿಸುವುದಾಗಿ, ವಾಹನವನ್ನು ಹಾಜರುಪಡಿಸುವುದಾಗಿ ಕೋರಿದ ಮೇರೆ ಸಾಕ್ಷಿ ವಿಚಾರಣೆ ನಡೆಸಲು ದಿನಾಂಕ:13–03–2008 ರಂದು ನಿಗಧಿಪಡಿಸಲಾಯಿತ್ತು. ದಿನಾಂಕ:29–05–08 ರಂದು ವಿಚಾರಣೆಯನ್ನು ದಿನಾಂಕ:12–06–2008 ಕ್ಕೆ ಮುಂದೂಡಲಾಯಿತ್ತು. ದಿನಾಂಕ:31–07–2008 ರಂದು ವಿಚಾರಣೆ ನಡೆಸಿ 21–08–2008ಕ್ಕೆ ಮುಂದೂಡಲಾಯಿತು.

ದಿನಾಂಕ:21–08–2008 ರಂದು ಸಹಾಯಕ ಸರ್ಕಾರಿ ವಕೀಲರು ಹಾಗೂ ಅರ್ಜಿದಾರರ ಪರ ವಕೀಲರು ಹಾಜರಾಗಿರುತ್ತಾರೆ. ವಿಚಾರಣೆಯನ್ನು ದಿನಾಂಕ:11–09–2008 ಕ್ಕೆ ಮುಂದೂಡಲಾಯಿತ್ತು.

ಅರ್ಜಿದಾರರ ಶ್ರೀ ಬಿ.ಬಿ. ಕಾರ್ಯಪ್ಪರವರು ಪೌತರಾಗಿರುವುದಾಗಿ ಅವರ ವಾರಸುದಾರರು ಬ್ಯಾಂಕ್ ಗ್ಯಾರಂಟಿಯನ್ನು ನವೀಕರಿಸಲು ಆಸಕ್ತಿವಹಿಸುತ್ತಿಲ್ಲವೆಂದು ವ್ಯವಸ್ಥಾಪಕರು ಕಾರ್ಪೊರೇಶನ್ ಬ್ಯಾಂಕ್‌ರವರು ದಿನಾಂಕ:20–02–2009 ರಂದು ಈ ಕಛೇರಿಗೆ ತಿಳಿಸಿರುತ್ತಾರೆ.

ಅರ್ಜಿದಾರರ ಪುತ್ರರಾದ ಶ್ರಿ.ಬಿ.ಕೆ.ನಾಣಯ್ಯರವರು ಬ್ಯಾಂಕ್ ಗ್ಯಾರಂಟಿಯನ್ನು ನವೀಕರಿಸಲು ಸಹಕರಿಸದ ಕಾರಣ ವಾಹನ ಲಾರಿ ಸಂಖ್ಯೆ ಕೆಎ 12–3652ನ್ನು ಜಪ್ತಿ ಮಾಡಿ ವರದಿ ಸಲ್ಲಿಸುವಂತೆ ವಲಯ ಅರಣ್ಯ ಅಧಿಕಾರಿ ಪೊನ್ನಂಪೇಟೆರವರಿಗೆ ತಿಳಿಸಲಾಯಿತು.

ವಲಯ ಅರಣ್ಯ ಅಧಿಕಾರಿ ಪೊನ್ನಂಪೇಟೆರವರು ಅರ್ಜಿದಾರರಾದ ಪೌತಿ ಬಿ.ಬಿ. ಕಾರ್ಯಪ್ಪ ರವರ ಪುತ್ರ ಬಿ.ಕೆ. ನಾಣಯ್ಯರವರನ್ನು ಸಂಪರ್ಕಿಸಿ ವಾಹನವನ್ನು ಪೈನಾನ್ಸ್‌ರವರು ತೆಗೆದುಕೊಂಡು ಹೋಗಿರುವುದಾಗಿ ಬ್ಯಾಂಕ್ ಗ್ಯಾರಂಟಿಯನ್ನು ನವೀಕರಿಸಿಕೊಟ್ಟಲ್ಲಿ ಮೊಕದ್ದಮೆಯನ್ನು ನಡೆಸಬಾರದಾಗಿ ತಿಳಿಸಿರುವುದಾಗಿ ವರದಿ ಸಲ್ಲಿಸಿರುತ್ತಾರೆ. ಆದ್ದುದರಿಂದ ಅರ್ಜಿದಾರರು ದಿನಾಂಕ:12–11–2003ರ ಮಧ್ಯಂತರ ಆದೇಶದ ಷರತ್ತುಗಳನ್ನು ಉಲ್ಲಂಘಿಸಿರುವುದರಿಂದ ಮತ್ತು ಅರ್ಜಿದಾರರು ಪೌತರಾಗಿರುವುದರಿಂದ ವಾಹನವನ್ನು ನ್ಯಾಯಾಲಯಕ್ಕೆ ಹಾಜರುಪಡಿಸದ ಕಾರಣ ಸದ್ರಿಯವರು ನೀಡಿರುವ ಬ್ಯಾಂಕ್ ಗ್ಯಾರಂಟಿ ರೂ. 30,000–00 ವನ್ನು ಹಾಗೂ ಸ್ವತ್ತು ಬೀಟೆ ಸೈಜು 37 ಸಂಖ್ಯೆಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡಂತೆ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮೇಲ್ಕಂಡ ವಿದ್ಯಮಾನಗಳ ಪ್ರಕಾರ ಹೆಚ್.ಸಿ. ಕಾಂತರಾಜು (ಭಾಅ.ಸೇ) ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ವಿರಾಜಪೇಟೆ ವಿಭಾಗ, ವಿರಾಜಪೇಟೆ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71(ಎ)ಯಿಂದ (ಜಿ)ಯವರೆಗೆ ಹಾಗೂ ಈ ವರೆಗಿನ ತಿದ್ದುಪಡಿಯನುಸಾರ ದತ್ತವಾದ ಅಧಿಕಾರವನ್ನು ಚಲಾಯಿಸಿ ಅರಕ್ಷಕ ಉಪ ನಿರೀಕ್ಷಕರು ಕುಟ್ಟಾರವರ ಮೊಕದ್ದಮೆ ಸಂಖ್ಯೆ 54/2002–03 ರಲ್ಲಿ ಅಮಾನತ್ತು ಪಡಿಸಲಾದ ಬೀಟೆಸೈಜು 37 ಸಂಖ್ಯೆ ಸೊತ್ತನ್ನು ಹಾಗೂ ಕಾರ್ಪೊರೆಶನ್ ಬ್ಯಾಂಕ್ ಪೊನ್ನಂಪೇಟೆ ರವರು ನೀಡಿರುವ ಬ್ಯಾಂಕ್ ಗ್ಯಾರಂಟಿ ರೂ.30,000–00 (ಮೂವತ್ತು ಸಾವಿರ) ಸಂಖ್ಯೆ 2/2003 ದಿನಾಂಕ:07–11–2003ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಈ ಆದೇಶದ ವಿರುದ್ದ ಮೇಲ್ಮನವಿ ಸಲ್ಲಿಸುವುದಾದರೆ ಇನ್ನೂ 30 ದಿನಗಳ ಒಳಗಾಗಿ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಮುಟ್ಟುಗೋಲು ಹಾಕಿಕೊಳ್ಳಲಾದ ಸೊತ್ತು ಮತ್ತು ಬ್ಯಾಂಕ್ ಗ್ಯಾರಂಟಿ ವಿವರ.

| | |
|---|---|
| 1) ಸ್ವತ್ತು ಸಂಖ್ಯೆ | ಬೀಟೆ ಸೈಜು 37 |
| 2) ಬ್ಯಾಂಕ್ ಗ್ಯಾರಂಟಿ | ರೂ 30,000–00 ಗ್ಯಾರಂಟಿ ಸಂಖ್ಯೆ 2/03<br>ದಿನಾಂಕ 7–11–03 ಕಾರ್ಪೊರೇಷನ್ ಬ್ಯಾಂಕ್, ಪೊನ್ನಂಪೇಟೆ. |

ಈ ಆದೇಶವನ್ನು ದಿನಾಂಕ:28–01–2010 ರಂದು ತೆರೆದ ನ್ಯಾಯಾಲಯದಲ್ಲಿ ಉದ್ಘೋಷಿಸಿ ನನ್ನ ಸಹಿ ಮತ್ತು ನ್ಯಾಯಾಲಯದ ಮೊಹರು ಹಾಕಿ ಬಿಡುಗಡೆ ಮಾಡಿರುತ್ತೇನೆ.

**ಹೆಚ್.ಸಿ. ಕಾಂತರಾಜು ಭಾ.ಅ.ಸೇ**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ವಿರಾಜಪೇಟೆ ವಿಭಾಗ, ವಿರಾಜಪೇಟೆ.

ಪಿ.ಆರ್.327

## OFFICE OF THE DEPUTY COMMISSIONER, HASSAN DISTRICT, HASSAN

## NOTIFICATION

**No.RRT/Bhoomi/67/09-10, Dated:23rd March, 2010**

**Sub:** Issue of certificates with manual signature by Tahsildar, Channarayapatna during period 23.03.2010 to 29.03.2010 due to technical problem of Nemmadi RDS application version 2.2

**Ref:** Circular No.EDCS/NMC/02/REV/2007, Dated:23.03.2010.

It has been noted that there is an intermittent problem in the generation of final copy of the certificate at telecentre level in Nemmadi RDS 2.2 version installed at Channarayapatna Taluka from 23.03.2010.

It is informed by the Directorate vide circular cited above, that the problem is being attended by the Project Management team in co-ordination with Microsoft. In order to tide over the technical problem till it is resolved and to ensure that the citizens are not put into inconvenience, I, Naveen Raj Singh, I.A.S., Deputy Commissioner, Hassan after applying my mind, order that Tahsildar, Channarayapatna is empowered to sign the fair copy of RDS certificate at the case worker level itself manually from 23.03.2010 to 29.03.2010 or till the issue is resolved which ever is earlier.

The various authorities, to whom any certificate is presented, issued during the above period by Tahsildar, Channarayapatna should accept manually signed certificate.

This notification shall automatically expired on 29.03.2010.

No manual certificate, issue by Tahsildar Channarayapatna During the period not covered by the above notification should be accepted by any authority.

**NAVEEN RAJ SINGH**
Deputy Commissioner,
Hassan District, Hassan.

PR-647

## ವಾಣಿಜ್ಯ ತೆರಿಗೆ ಇಲಾಖೆ

## ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ 2003ರ ಪ್ರಕರಣ 59ರ ಉಪ ಪ್ರಕರಣ (4)ರ ಅಡಿ ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ), ಬೆಂಗಳೂರು ಇವರ ನಡಾವಳಿಗಳು

**ವಿಷಯ:** ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ 2003–'ಪ್ರಿ ಕುಕ್ಡ್ ಮತ್ತು ಪ್ರೋಸೆಸ್ಡ್ ವೈಟ್‌ಓಟ್ಸ್' ಮೇಲೆ ಅನ್ವಯವಾಗುವ ತೆರಿಗೆ ದರದ ಸ್ಪಷ್ಟೀಕರಣ ಕುರಿತು.

**ಉಲ್ಲೇಖ:** ಶ್ರೀ ಶ್ರೀನಾಥ್, ಮಾಲೀಕರು, ಮೆ.ಸಿ.ಪಿ. ಎಜೆನ್ಸೀಸ್, ನಂ.36, 19ನೇ ಅಡ್ಡರಸ್ತೆ, 7ನೇ ಮುಖ್ಯರಸ್ತೆ, ಸಂಪಂಗಿರಾಮನಗರ, ಬೆಂಗಳೂರು–560027, ಇವರ ಅರ್ಜಿ ದಿನಾಂಕ:24.08.2009.

ಅರ್ಜಿದಾರರಾದ ಶ್ರೀ ಶ್ರೀನಾಥ್, ಮಾಲೀಕರು, ಮೆ.ಸಿ.ಪಿ. ಎಜೆನ್ಸೀಸ್, ನಂ.36, 19ನೇ ಅಡ್ಡರಸ್ತೆ, 7ನೇ ಮುಖ್ಯರಸ್ತೆ, ಸಂಪಂಗಿರಾಮನಗರ, ಬೆಂಗಳೂರು–560027, ಇವರು ಮೇಲ್ಕಂಡ ಅರ್ಜಿಯಲ್ಲಿ ಪ್ರಿ ಕುಕ್ಡ್ ಮತ್ತು ಪ್ರೋಸೆಸ್ಡ್ ವೈಟ್‌ಓಟ್ಸ್' ಮೇಲೆ ಅನ್ವಯವಾಗುವ ತೆರಿಗೆ ದರದ ಸ್ಪಷ್ಟೀಕರಣವನ್ನು ಕೋರಿರುತ್ತಾರೆ.

2. 2003ರ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮದ ಪ್ರಕರಣ 59ರ ಉಪ ಪ್ರಕರಣ (4)ರ ಮೇರೆಗೆ ವಾಣಿಜ್ಯ ತೆರಿಗೆ ಆಯುಕ್ತರು (ಕರ್ನಾಟಕ), ಬೆಂಗಳೂರು ಇವರು ತೆರಿಗೆಯ ನಿರ್ಧರಣೆ ಹಾಗೂ ರಾಜಸ್ವದ ಸಂಗ್ರಹಣೆ ಕಾರ್ಯದಲ್ಲಿ ಏಕರೂಪತೆಯನ್ನು ತರುವ ಉದ್ದೇಶಕ್ಕಾಗಿ, ಸದರಿ ಅಧಿನಿಯಮದಡಿಯಲ್ಲಿ ತೆರಿಗೆಗೆ ಗುರಿಯಾಗತಕ್ಕ ಸರಕುಗಳ ಸಂಬಂಧದಲ್ಲಿ ಈ ಅಧಿನಿಯಮದ ಅಡಿಯಲ್ಲಿ ಸಂದಾಯ ಮಾಡತಕ್ಕ ತೆರಿಗೆ ದರವನ್ನು ಸ್ಪಷ್ಟಪಡಿಸುವುದು ಅವಶ್ಯವೆಂದು ಅಥವಾ ಯುಕ್ತವೆಂದು ಭಾವಿಸಿದರೆ ಹಾಗೆ ಮಾಡಲು ಅಧಿಕಾರ ಹೊಂದಿದ್ದಾರೆ.

ಅರ್ಜಿದಾರರು ಕೋರಿರುವ ಸ್ಪಷ್ಟೀಕರಣವು ಮೇಲೆ ನಮೂದಿಸಿದ ಉಪಬಂಧದ ವ್ಯಾಪ್ತಿಗೊಳಪಡುವುದರಿಂದ ತೆರಿಗೆ ದರದ ಬಗ್ಗೆ ಸ್ಪಷ್ಟಪಡಿಸುವುದು ಸದರಿ ಉಪಬಂಧದ ಉದ್ದೇಶ ಸಾಧನೆಗಾಗಿ ಅವಶ್ಯವೆಂದು ಮನವರಿಕೆಯಾಗಿದೆ.

3. ಈ ಹಿನ್ನೆಲೆಯಲ್ಲಿ ತೆರಿಗೆ ದರವನ್ನು ಈ ಕೆಳಕಂಡಂತೆ ಸ್ಪಷ್ಟಪಡಿಸಲಾಗಿದೆ.

**ಸ್ಪಷ್ಟೀಕರಣ ಆದೇಶ ಸಂಖ್ಯೆ: ಸಿಎಲ್ಆರ್/ಸಿಆರ್–95/09–10, ದಿನಾಂಕ:20ನೇ ಜನವರಿ, 2010**

'ಪ್ರಿ ಕುಕ್ಡ್ ಮತ್ತು ಪ್ರೋಸೆಸ್ಡ್ ವೈಟ್ಓಟ್ಸ್' 2003ರ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮದ ಪ್ರಕರಣ 4(1)(ಬಿ)ಯಂತೆ ಶೇಕಡಾ 12.5ರಂತೆ ತೆರಿಗೆಗೊಳಪಡುತ್ತದೆ ಎಂದು ಈ ಮೂಲಕ ಸ್ಪಷ್ಟೀಕರಿಸಲಾಗಿದೆ.

**ಪ್ರದೀಪ್ ಸಿಂಗ್ ಖರೋಲ**
ವಾಣಿಜ್ಯ ತೆರಿಗೆಗಳ ಆಯುಕ್ತರು,
(ಕರ್ನಾಟಕ), ಬೆಂಗಳೂರು.

ಪಿ.ಆರ್.182

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ರವರ ನ್ಯಾಯಾಲಯ**

**ಸಂಖ್ಯೆ:ಇಎಕ್ಸ್ಇ:ಸಿಆರ್ಎಂ:333/2001–02, ದಿ:29ನೇ ಡಿಸೆಂಬರ್, 2009**

**ಉಪಸ್ಥಿತರು:** ಶ್ರೀ.ಸಿ.ಎಲ್. ಜಯರಾಮ್
ಅಧಿಕೃತ ಅಧಿಕಾರಿ ಹಾಗೂ
ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ.

| **ಪಿರ್ಯಾದುದಾರರು** | **ವಿರುದ್ದ** | **ಆರೋಪಿಗಳು** |
|---|---|---|
| ಅರಕ್ಷಕ ಉಪ ನಿರೀಕ್ಷಕರು,<br>ಗೋಣಿಕೊಪ್ಪ | | 1) ದೇವಣಿಮಾಡ ಪಿ.ದಿನೇಶ್,<br>ಅರ್ವತ್ತೋಕ್ಲು,<br>2) ಎಸ್. ಕೃಷ್ಣ, ಅರ್ವತ್ತೋಕ್ಲು,<br>3) ಅತಾವುಲ್ಲಾ, ಮಾಪಿಳ್ಳೆ ತೋಡು,<br>4) ತುಳಸಿ ರೈ, ಜೋಡುಬಿಟೀ<br>5) ಶ್ರೀಮತಿ ಮುಕ್ಕಾಟಿರ ಇಂದಿರಾ<br>ಅರ್ವತ್ತೋಕ್ಲು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:18–10–2001 ರಂದು ಗೋಣಿಕೊಪ್ಪ ಅರಕ್ಷಕ ಉಪ ನಿರೀಕ್ಷಕರಿಗೆ ದೊರೆತ ವರ್ತಮಾನದ ಮೇರೆಗೆ ಠಾಣಾ ಸಿಬ್ಬಂದಿಯವರೊಂದಿಗೆ ಹಾಗೂ ಪಂಚಾಯಿತಿದಾರರೊಂದಿಗೆ ನಡೆದುಕೊಂಡು ಮಹೇಂದ್ರರವರ ವಾಸದ ಮನೆ ಮುಂಭಾಗದ ಮರೆಯಲ್ಲಿ ಪಾರ ಕಾಯ್ದು ನಿಂತಿದ್ದಾಗ ಸಮಯ 11.00 ಗಂಟೆಗೆ ಅರುವತ್ತೊಕ್ಲು ಗ್ರಾಮದ ಕಡೆಯಿಂದ ಗೋಣಿಕೊಪ್ಪ ಕಡೆಗೆ ಬರುತ್ತಿದ್ದ ಅಟೋರಿಕ್ಷಾ ಸಂಖ್ಯೆ:ಕೆಎ–12–4006ನ್ನು ಅವರು ತಡೆದು ನಿಲ್ಲಿಸಿ ಪಂಚಾಯಿತಿದಾರರೊಂದಿಗೆ ಅಟೋರಿಕ್ಷಾದೊಳಗಡೆ ಪರಿಶೀಲಿಸಿದಾಗ ಚಾಲಕ ಅಟೋರಿಕ್ಷಾದಲ್ಲಿದ್ದು ಹಿಂಭಾಗದ ಸೀಟಿನಲ್ಲಿ ಎರಡು ಜನರು ಕುಳಿತಿದ್ದು ರಿಕ್ಷಾದ ಒಳಗಡೆ ಸೀಟಿನ ಹಿಂಬಾಗ ಸಾರಾಯಿ ಪ್ಯಾಕೇಟುಗಳು ಕಂಡುಬಂದಿದ್ದು ಹಿಂಭಾಗ ಕುಳಿತ್ತಿದ್ದವರನ್ನು ಸಾರಾಯಿ ಪ್ಯಾಕೇಟುಗಳ ಬಗ್ಗೆ ವಿಚಾರಣೆ ಮಾಡಿದಾಗ ಸಾರಾಯಿ ಪ್ಯಾಕೇಟುಗಳನ್ನು ಸಾಗಿಸಿ ಮಾರಾಟ ಮಾಡಲು ಯಾವುದೇ ಸರ್ಕಾರದ ರಹದಾರಿ ಇರುವುದಿಲ್ಲ. ಈ ಸಾರಾಯಿ ಪ್ಯಾಕೇಟುಗಳನ್ನು ಅರ್ವತ್ತೋಕ್ಲು ಗ್ರಾಮದ ವಾಸಿ ಶ್ರೀಮತಿ ಮುಕ್ಕಾಟೀರ ಇಂದಿರಾರವರ ಮನೆಯಲ್ಲಿ ನಾವು ಮತ್ತು ಇಂದಿರಾ ಹಾಗೂ ಭಂಟರ ತುಳಸಿರವರು ಸೇರಿ ತಯಾರಿಸಿದ್ದು, ಮಾರಾಟ ಮಾಡಲು ರಿಕ್ಷಾದಲ್ಲಿ ಸಾಗಾಟ ಮಾಡುತ್ತಿರುವುದಾಗಿದೆ. ಇಂದಿರಾರವರ ಮನೆಯೊಳಗೆ ಬಾಕಿ ಸಾರಾಯಿ ಪ್ಯಾಕೇಟುಗಳನ್ನು ಇಟ್ಟಿದ್ದು, ನಮ್ಮನ್ನು ಕರೆದುಕೊಂಡು ಹೋದರೆ ತೋರಿಸಿ ಕೊಡುತ್ತೇವೆಂದು ತಿಳಿಸಿದ ಮೇರೆಗೆ ಸದರಿಯವರ ಹೆಸರು ವಿಳಾಸ ವಿಚಾರ ಮಾಡಿದಾಗ ರಿಕ್ಷಾದ ಹಿಂಭಾಗದಲ್ಲಿ ಕುಳಿತ್ತಿದ್ದವನು ದೇವಣಿಮಾಡ ಪಿ.ದೀನೇಶ್, ತಂದೆ ಪೂವಯ್ಯ, ಹಾತೂರು, ಮಡಿಕೇರಿ ತಾಲ್ಲೂಕು ಹಾಲಿ c/o ಮುಕ್ಕಾಟಿರ ಇಂದಿರಾ ಅರ್ವತ್ತೋಕ್ಲು ಗ್ರಾಮ ಎಂದು ತಿಳಿಸಿದನು ಮತ್ತೊಬ್ಬನನ್ನು ವಿಚಾರಣೆ ಮಾಡಿದಾಗ ಎಸ್. ಕೃಷ್ಣ, ತಂದೆ ಸುಬ್ಬಾಚಾರಿ, ಚಾಲಕ ಗರಿಕೇರಿ ಪೈಸಾರಿ ವಾಸ ಅರವತ್ತೋಕ್ಲು ಎಂದು ತಿಳಿಸಿದ್ದು, ಆಟೋರಿಕ್ಷಾ ಓಡಿಸುತ್ತಿದ್ದವನು ಅತಾವುಲ್ಲಾ ಅಲಿಯಾಸ್ ಅಲ್ತಾಪ್ ತಂದೆ ಆಫೀಜ್ಖಾನ್, ಆಟೋ ರಿಕ್ಷಾ ಕೆಎ–12–4006 ರ ಚಾಲಕ ಮಾಪಿಳ್ಳೆತೋಡು ವಾಸ ಪೊನ್ನಂಪೇಟೆ ಎಂದು ತಿಳಿಸಿದ್ದು, ಸದರಿಯವರ ಸ್ವ ಇಚ್ಛಾ ಹೇಳಿಕೆ ಪಡೆದುಕೊಂಡು ಪಂಚಾಯತುದಾರರ ಸಮಕ್ಷಮ ರಿಕ್ಷಾದೊಳಗಡೆ ಇದ್ದ ಸಾರಾಯಿ ಪ್ಯಾಕೇಟುಗಳನ್ನು ಎಣಿಸಿದಾಗ ಒಟ್ಟು 200 ಪ್ಯಾಕೇಟುಗಳಿದ್ದು, ಸದರಿ ಸಾರಾಯಿ ಪ್ಯಾಕೇಟುಗಳ ಮೇಲೆ 100 ಮಿಲಿ, 35 ಯುಪಿ, ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಾಗಿದೆ ಮೈಸೂರು ಶುಗರ್ ಕಂಪೆನಿ ಲಿ. ಮೈಸೂರು ಜಿಲ್ಲೆ ಎಂದು ಬರೆದಿರುವುದು ಕಂಡು ಬಂದಿದ್ದು, ಮೇಲ್ಕಂಡ ಪ್ಯಾಕೇಟುಗಳ ಪೈಕಿ ಒಂದನ್ನು ಸ್ಯಾಂಪಲ್ತೆಗೆದು ಬಿಳಿಬಟ್ಟೆಯಿಂದ ಸುತ್ತಿ ಪ್ಯಾಕ್ ಮಾಡಿದ್ದು ಅರಗಿನಿಂದ ಸೀಲು ಮಾಡಿರುತ್ತಾರೆ. ಬಾಕಿ ಸಾರಾಯಿ ಪ್ಯಾಕೇಟುಗಳನ್ನು ಮತ್ತು ಆಟೋರಿಕ್ಷಾ

ಸಂ.ಕೆಎ–12–4006 ರನ್ನು ವಶಕ್ಕೆ ತೆಗೆದುಕೊಂಡು ಸದರಿ ಸಾರಾಯಿ ಪ್ಯಾಕೇಟುಗಳನ್ನು ಸಾಗಾಣಿಕೆ ಮಾಡಲು ಯಾವುದೇ ರಹದಾರಿ ಇಲ್ಲದಿರುವುದರಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 32, 34, 43ಎ ರ ಪ್ರಕಾರ ಆರಕ್ಷಕ ಉಪ ನಿರೀಕ್ಷಕರು. ಗೋಣಿಕೊಪ್ಪ ಠಾಣೆ ಇವರು ಮೊಕದ್ದಮೆ.ಸಂ.167/2001 ದಿ:18–10–2001 ರಂತೆ ಪ್ರಕರಣ ದಾಖಲಿಸಿಕೊಂಡು ನಂತರ ಮುಂದಿನ ಕ್ರಮಕ್ಕಾಗಿ ಅಬಕಾರಿ ಉಪ ನಿರೀಕ್ಷಕರು, ವಿರಾಜಪೇಟೆ ಉಪ ವಲಯ ಇವರಿಗೆ ವರ್ಗಾಯಿಸಿರುತ್ತಾರೆ.

ದಿನಾಂಕ:29–10–2001ರಂದು ವಾಹನದ ಮಾಲೀಕರೆಂದು ಶ್ರೀ.ಕೆ.ಜಿ.ನಾರಾಯಣ, ತಂದೆ ಕೆ.ಪಿ.ಗೋಪಾಲ, ಪಾಲಿಬೆಟ್ಟ ರಸ್ತೆ, ಗೋಣಿಕೊಪ್ಪ ಟೌನ್, ಕೊಡಗು ಜಿಲ್ಲೆರವರು ಅವರ ಪರ ವಕೀಲರಿಂದ ಅರ್ಜಿಯನ್ನು ಸಲ್ಲಿಸಿ, ವಾಹನದ ಮಾಲೀಕರು ಆಟೋವನ್ನು ಚಾಲಕನನ್ನು ನೇಮಿಸಿ ಬಾಡಿಗೆಗೆ ಓಡಿಸುತ್ತಿದ್ದು, ಚಾಲಕನಿಗೆ ಪ್ರಯಾಣಿಕರು ಸಾರಾಯಿ ಪ್ಯಾಕೇಟುಗಳನ್ನು ರಿಕ್ಷಾದಲ್ಲಿ ತೆಗೆದುಕೊಂಡಿರುವುದು ತಿಳಿದಿರುವುದಿಲ್ಲ. ಮತ್ತು ಕಾನೂನಿನ ಅರಿವಿಲ್ಲದೆ, ತಿಳುವಳಿಕೆ ಇಲ್ಲದೆ ಈ ಅಪರಾಧ ನಡೆದಿರುತ್ತದೆ. ಆಟೋರಿಕ್ಷಾ ಬಾಡಿಗೆಯಿಂದ ಬರುವ ಹಣದಿಂದ ವಾಹನದ ಮಾಲೀಕರ ಜೀವನ ಅವಲಂಬಿಸಿರುತ್ತದೆ. ಸದರಿ ವಾಹನವನ್ನು ಚಾಲನೆ ಇಲ್ಲದೆ ನಿಲ್ಲಿಸಿದಲ್ಲಿ ವಾಹನದ ಬಿಡಿ ಭಾಗಗಳು ಹಾಳಾಗುವ ಸಾಧ್ಯತೆ ಇರುವುದರಿಂದ ಸದರಿ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸಿಕೊಡಬೇಕಾಗಿ ಹಾಗೂ ತಾವು ವಿದಿಸುವ ಎಲ್ಲಾ ಷರತ್ತುಗಳಿಗೂ ಬದ್ಧರಾಗುವುದಾಗಿ ಮತ್ತು ಭದ್ರತೆಯನ್ನು ನೀಡುವುದಾಗಿ ಕೋರಿಕೊಂಡಿರುತ್ತಾರೆ.

ಈ ಸಂಬಂಧ ಈ ಪ್ರಾಧಿಕಾರದ ಪತ್ರ ಸಮ ಸಂಖ್ಯೆ ದಿ:27–11–2001 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ರವರಿಗೆ ಪತ್ರ ಬರೆಯಲಾಗಿದ್ದು, ಸದರಿ ವಾಹನಕ್ಕೆ ಇಂದಿನ ಮಾರ್ಕೆಟ್ ಮೌಲ್ಯವನ್ನು ನಿಗದಿಪಡಿಸಲು ಕೋರಲಾಗಿತ್ತು. ಅದರಂತೆ ಹಿರಿಯ ಮೋಟಾರು ವಾಹನ ತನಿಖಾಧಿಕಾರಿಗಳು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ, ಕೊಡಗು ಜಿಲ್ಲೆ ಇವರು ಪರಿಶೀಲಿಸಿ ರೂ.24,000/– ಮೌಲ್ಯವನ್ನು ನಿಗದಿಪಡಿಸಿ ದಿ:3–12–2001 ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಬಗ್ಗೆ ದಿ:19–1–2002 ರಂದು ಪ್ರಾಧಿಕಾರದಲ್ಲಿ ವಿಚಾರಣೆಯನ್ನು ಕರೆಯಲಾಗಿದ್ದು ಈ ದಿನ ಸಹಾಯಕ ಸರ್ಕಾರಿ ಅಭಿಯೋಗ ನಿರ್ದೇಶಕರು, ವಾಹನದ ಮಾಲೀಕರು ಅವರ ಪರ ವಕೀಲರು ಹಾಜರಿದ್ದು, ಪ್ರಾಧಿಕಾರದಲ್ಲಿ ತೀರ್ಮಾನಿಸಿ ಪ್ರಾದೇಶಿಕ ಅಧಿಕಾರಿಗಳು ವಾಹನಕ್ಕೆ ನಿಗಧಿಪಡಿಸಿದ ಮೌಲ್ಯಕ್ಕೆ ಸಮನಾದ ಬ್ಯಾಂಕ್ ಗ್ಯಾರೆಂಟಿಯನ್ನು ಸಲ್ಲಿಸಿದಲ್ಲಿ ವಾಹನವನ್ನು ಬಿಡುಗಡೆಗೊಳಿಸುವುದಾಗಿ ತೀರ್ಮಾನಿಸಲಾಗಿತ್ತು.

ಸದರಿ ಅದೇಶವನ್ನು ವಾಹನದ ಮಾಲೀಕರು ಒಪ್ಪಿಕೊಂಡು ಚಿಕ್ಕಮಗಳೂರು ಕೊಡಗು ಗ್ರಾಮೀಣ ಬ್ಯಾಂಕ್, ಗೋಣಿಕೊಪ್ಪ ಶಾಖೆ ಇವರಿಂದ ಬ್ಯಾಂಕ್ ಗ್ಯಾರೆಂಟಿ ಸಂ.ಒಆರ್/045/1073/ಬಿಜಿ/01/2001–02 ದಿ:26–12–01ರನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಆದೇಶ ಸಂ:ಇಎಕ್ಸ್ಇ:3:ಸಿಆರ್ಎಂ:333/2001–02, ದಿ:11–2–2002 ರಂದು ಷರತ್ತು ಬದ್ದವಾದ ಆದೇಶವನ್ನು ನೀಡಿ ವಾಹನವನ್ನು ಬಿಡುಗಡೆ ಮಾಡಲಾಗಿರುತ್ತದೆ. ತದನಂತರ ವಾಹನದ ಮಾಲೀಕರು ಬ್ಯಾಂಕ್ ಗ್ಯಾರೆಂಟಿ ವಾಯಿದೆಯನ್ನು ಸಮಯಕ್ಕೆ ಸರಿಯಾಗಿ ವಿಸ್ತರಿಸುತ್ತಾ ಬಂದಿರುತ್ತಾರೆ. ನಂತರ ದಿ:26–11–2005, 7–01–2006, 2–02–2006, 16–02–2006, 01–02–2007, 1–03–2007, 19–04–2007, 05–05–2007, 4–08–2008, 14–08–2008, 26–08–2008, 9–09–2008, 22–11–2008, 2–12–2008, 24–01–2009, 4–07–2009, 28–07–2009, 17–07–2009ರಂದು ವಿಚಾರಣೆಯನ್ನು ನಡೆಸಲಾಗಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತವೆ.

**ಮೊದಲನೆ ವಿವಾದಾಂಶ:** ದಿ:18–10–2001 ರಂದು ಅಟೋ ರಿಕ್ಷಾ ಸಂ:ಕೆಎ–12–4006 ರಲ್ಲಿ ಅಕ್ರಮ ಸಾರಾಯಿ ಪ್ಯಾಕೇಟ್ ಸಾಗಾಣಿಕೆಯಾಗಿದೆಯೇ ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯ ಉಲ್ಲಂಘನೆಗೆ ಬಳಸಲಾಗಿದೆಯೇ

**ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮ ಸಾರಾಯಿ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನದ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತೆ ಕ್ರಮಗಳನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನದ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ ಅಥವಾ ಇಲ್ಲವೇ,

**ಮೂರನೇ ವಿವಾದಾಂಶ:** ಜಪ್ತು ಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಇಲ್ಲವೇ?

ಒಂದನೇ ಅಂಶವನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಅದೇಶದಂತೆ ಪರಿಗಣಿಸಲು ಕೆಳಕಂಡಂತೆ ಉಲ್ಲೇಖಿಸಲಾಗಿದೆ.ದಿ:5–05–2007ರಂದು ಅಭಿಯೋಗ ಪರ

ಸಾಕ್ಷಿದಾರರಾದ **ಪ್ರಾ.ಸ. 1:** ಶ್ರೀ ಹೆಚ್. ಗುರುಬಸವರಾಜ್, ಆರಕ್ಷಕ ಉಪ ನಿರೀಕ್ಷಕರು ಇವರು ಪ್ರಕರಣ ದಾಖಲು ಮಾಡಿದ ಅಧಿಕಾರಿಯಾಗಿದ್ದು, ಇವರು ದಿ:5–5–2007 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ. ನಾನು ಜುಲೈ–2001 ರಿಂದ ಜನವರಿ 2002 ರವರೆಗೆ ಗೋಣಿಕೊಪ್ಪ ಪೋಲಿಸ್ ಠಾಣೆಯಲ್ಲಿ ಪಿ.ಎಸ್.ಐ ಯಾಗಿ ಕರ್ತವ್ಯ ನಿರ್ವಹಿಸಿರುತ್ತೇನೆ. ದಿನೇಶ, ಕೃಷ್ಣ ಹಾಗೂ ಅತಾವುಲ್ಲಾ ಎಂಬ ಆರೋಪಿಗಳನ್ನು ನೋಡಿರುತ್ತೇನೆ.

ದಿ:18–10–2001ರಂದು ನಾನು ಠಾಣಾ ಪ್ರಭಾರದಲ್ಲಿದ್ದಾಗ ಸುಮಾರು 10.30 ಗಂಟೆಯ ಸಮಯದಲ್ಲಿ ಗೋಣಿಕೊಪ್ಪದ ಅರ್ವತ್ತೋಕ್ಲು ಗ್ರಾಮದ ಕಡೆಯಿಂದ ಯಾರೋ ವ್ಯಕ್ತಿಗಳು ಡ್ಯೂಪ್ಲಿಕೇಟ್ ಸಾರಾಯಿ ಪ್ಯಾಕೇಟುಗಳನ್ನು ಮಾರಾಟ ಮಾಡಿ ಅಟೋ ರಿಕ್ಷಾದಲ್ಲಿ ತರುತ್ತಿದ್ದರೆಂಬ ಮಾಹಿತಿ ಮೇರೆಗೆ ನಾನು ನಮ್ಮ ಸಿಬ್ಬಂದಿಗಳಾದ ಕ್ರೈಂ ಪಿ.ಎಸ್.ಐ ಉತ್ತಯ್ಯ, ಮುಖ್ಯ ಪೇದೆ ಲಿಂಗರಾಜು, ಪಿ.ಸಿ ಕುಟ್ಟಪ್ಪ ಹಾಗೂ ಉದಯ ಕುಮಾರ್, ಸೋಮೇಶ್, ಮೈನಾ ಕುಮಾರಿ ಇವರುಗಳನ್ನು ಕರೆದುಕೊಂಡು ಅರ್ವತ್ತೋಕ್ಲು ಗ್ರಾಮದ ಮಹೇಂದ್ರರವರ ಮನೆಯ ಹತ್ತಿರ ಕಾಯುತ್ತ ಕುಳಿತುಕೊಂಡಿದ್ದೇನು ಸಮಯ ಸುಮಾರು 10.30 ಗಂಟೆಗೆ ಗೋಣಿಕೊಪ್ಪ ಕಡೆಯಿಂದ ಒಂದು ಅಟೋರಿಕ್ಷಾ ಬರುತ್ತಿದ್ದು, ಅದನ್ನು ನಾವು ಗಮನಿಸಿ ತಡೆದು ನಿಲ್ಲಿಸಿ ನೋಡಿದಾಗ ಅದರ ಸಂ: ಕೆಎ–12–4006 ಅಗಿದ್ದು ಅದನ್ನು ಪರಿಶೀಲಿಸಿದಾಗ ಮುಂದುಗಡೆ ಒಬ್ಬ ಚಾಲಕನಿದ್ದು, ಹಿಂಬದಿ ಇಬ್ಬರು ಅಸಾಮಿಗಳು ಕುಳಿತುಕೊಂಡಿದ್ದರು, ನಂತರ ಸದರಿಯವರನ್ನು ವಿಚಾರಿಸಿದಾಗ ಸದರಿ ವಾಹನವು ಪೊನ್ನಂಪೇಟೆಯಿಂದ ಬರುತ್ತಿದ್ದುದಾಗಿ ಅದನ್ನು ಪರೀಕ್ಷಿಸಿದಾಗ ಅಟೋ ಹಿಂಭಾಗದಲ್ಲಿ ಒಂದು ಪ್ಲಾಸ್ಟಿಕ್ ಚೀಲದಲ್ಲಿ ಸಾರಾಯಿ ಪ್ಯಾಕೇಟ್ ಇದ್ದದ್ದನ್ನು ತೆಗೆದು ನೋಡಲಾಗಿ 200 ಸಾರಾಯಿ ಪ್ಯಾಕೇಟ್ ಇದ್ದದ್ದು ಕಂಡು ಬಂದಿತ್ತು. ಆರೋಪಿಗಳನ್ನು ವಿಚಾರ ಮಾಡಿದಾಗ ದಿನೇಶ, ಕೃಷ್ಣ ಮತ್ತು ಅತಾವುಲ್ಲಾ ಎಂಬುದಾಗಿ ತಿಳಿಸಿರುತ್ತಾರೆ. ನಂತರ ವಿಚಾರ ಮಾಡಲಾಗಿ ಮುಕ್ಕಾಟೀರ ಇಂದಿರಾರವರ ಮನೆಯಲ್ಲಿ ತಯಾರು ಮಾಡಿ ಮಾರಾಟ ಮಾಡಲು ನಾವುಗಳೇ ಸ್ವತ: ತಂದಿದ್ದು, ಅದರ ಬಗ್ಗೆ ಯಾವುದೇ ಪರವಾನಗಿ ಇಲ್ಲವೆಂದು ತಿಳಿಸಿರುತ್ತಾರೆ. ಉಗ್ರಾಣದಲ್ಲಿ ತಯಾರಿಸಲಾದ 100 ಮಿಲಿಯ ಆರೋಗ್ಯಕ್ಕೆ ಹಾನಿಕರ ಇನ್ನು ಮುಂತಾದ ಮುದ್ರಿತ ಪದಗಳಿದ್ದು, ಅವುಗಳನ್ನು ಪಂಚರ ಸಮಕ್ಷಮ ಪಂಚನಾಮೆ ಮಾಡಿ ಸಾರಾಯಿ ಪ್ಯಾಕೇಟುಗಳನ್ನು ಅಮಾನತ್ತು ಪಡಿಸಿಕೊಂಡು ಸ್ಯಾಂಪಲ್‌ಗಾಗಿ ಒಂದು ಪ್ಯಾಕೇಟನ್ನು ತೆಗೆದುಕೊಳ್ಳಲಾಯಿತು. ಅದನ್ನು ಒಂದು ಬಿಳಿ ಬಟ್ಟೆಯಲ್ಲಿ ಕಟ್ಟಿ, ಅರಗಿನಿಂದ ಸೀಲು ಮಾಡಿ ಸಹಿ ಕೂಡ ಮಾಡಿರುತ್ತೇನೆ. ಪಂಚನಾಮೆ ಕಾಲದಲ್ಲಿ ಪೂರ್ಣವಾಗಿ ವರದಿಯಲ್ಲಿ ನಮೂದು ಮಾಡಿರುತ್ತೇನೆ. ಅನಂತರ ಠಾಣೆಗೆ ಹಾಜರಾಗಿ ನಾನೇ ಸ್ವತ: ವರದಿ ಬರೆದು ಅ ವರದಿಯ ಆಧಾರದ ಮೇಲೆ ಪ್ರ.ವ.ವ.ಯನ್ನು ಗುನ್ನೆ ಸಂ:167:2001ರಂತೆ ನೋಂದಾಯಿಸಿಕೊಂಡು ನ್ಯಾಯಾಲಯಕ್ಕೂ ಹಾಗೂ ಮೇಲಾಧಿಕಾರಿಗಳಿಗೂ ಸಲ್ಲಿಸಿರುತ್ತೇನೆ. ಪಂಚನಾಮೆ ಕಾಲದಲ್ಲಿ ಹರೀಶ್, ಹನೀಫ್ ಎಂಬ ವ್ಯಕ್ತಿಗಳ ಸಹಿಯನ್ನು ಕೂಡ ಪಡೆದುಕೊಂಡಿರುತ್ತೇನೆ. ಅ ಸಮಯದಲ್ಲಿ ಅಂದರೆ ತನಿಖಾ ಕಾಲದಲ್ಲಿ ಘಟನೆಗೆ ಸಂಬಂಧಪಟ್ಟಂತೆ 2 ಮಹಜರುಗಳನ್ನು ಮಾಡಿದ್ದು ಅದರ ನಿಶಾನೆ ಅಂದರೆ ದೂರನ್ನು ನಿಶಾನೆ ಪಿ.1 ಸಾಕ್ಷಿಯ ಸಹಿಯನ್ನು ನಿಶಾನೆ ಪಿ–1ಎ ಎಂದು ಗುರುತಿಸಲಾಯಿತು. ಅದೇ ರೀತಿ 2 ಮಹಜರುಗಳನ್ನು ಅಂದರೆ ದಿ:18–10–2001 ರಂದು ಅರ್ವತ್ತೋಕ್ಲು ಮತ್ತು ಗೋಣಿಕೊಪ್ಪ ಮಧ್ಯದಲ್ಲಿರುವ ಜಾಗದಲ್ಲಿ ಮಹಜರು ಮಾಡಿ ಅ ಸಮಯದಲ್ಲಿ ಒಂದು ಅಟೋರಿಕ್ಷಾವನ್ನು ಹಾಗೂ ಸಾರಾಯಿ ಪ್ಯಾಕೇಟನ್ನು ವಶಪಡಿಸಿಕೊಂಡು ಅದರ ನಿಶಾನೆ ಪಿ–1 ಸಾಕ್ಷಿಯ ಸಹಿ ನಿಶಾನೆ ಪಿ–2ಎ ಎಂದು ಗುರುತಿಸಲಾಯಿತು. ಅದೇ ರೀತಿ ದಿ:18–10–2001 ರಂದು ನಾಪೋಕ್ಲು ವ್ಯಾಪ್ತಿಗೆ ಸೇರುವ ಮುಕ್ಕಾಟೀರ ಇಂದಿರಾ ರವರ ಮನೆಯ ಹತ್ತಿರ ಮಹಜರು ಮಾಡಿ ಆರೋಪಿ ಹಾಜರು ಪಡಿಸಿದ ಮೇಲೆ 175 ಸಾರಾಯಿ ಪ್ಯಾಕೇಟ್‌ಗಳನ್ನು ಹಾಗೂ ಚೀಲವನ್ನು ಅಮಾನತುಪಡಿಸಿಕೊಂಡಿರುತ್ತಾರೆ. ಅದನ್ನು ನಿಶಾನೆ ಪಿ–3 ಎಂದು ಸಹಿಯನ್ನು ನಿಶಾನೆ 3–ಎ ಎಂದು ಗುರುತಿಸಲಾಯಿತು. ನಂತರ ಅಲ್ಲಿ ಆರೋಪಿಗಳ ಸ್ವಇಚ್ಚೆ ಹೇಳಿಕೆಗಳನ್ನು ಪಡೆದುಕೊಂಡು ಅದನ್ನು ಈಗ ನೋಡಿದ್ದು ನಿಶಾನೆ–4 ರಿಂದ 6 ಮತ್ತು 4ಎ, 5ಎ ಮತ್ತು 6ಎ ಸಾಕ್ಷಿಯ ಸಹಿಗಳನ್ನು ಗುರುತಿಸಲಾಯಿತು.

ಪ್ರ.ವ.ವ. ಯನ್ನು ನೋಡಿದ್ದು ಅದನ್ನು ನಿಶಾನೆ ಪಿ–7 ಎಂದು ಗುರುತಿಸಲಾಯಿತು. ನಂತರ ಎಲ್ಲಾ ಆರೋಪಿಗಳನ್ನು ದಸ್ತಗಿರಿ ಮಾಡಿ (1, 2, 3) ರಿಮ್ಯಾಂಡ್ ಅರ್ಜಿ ಬರೆದು ಸಿಬ್ಬಂದಿ ಜೊತೆಯಲ್ಲಿ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ನಂತರ ಒಂದು ವರದಿಯನ್ನು ತಯಾರಿಸಿ ನ್ಯಾಯಾಲಯದ ಆದೇಶ ಹಾಗೂ ಅಬಕಾರಿ ಅಧೀಕ್ಷಕರ ಆದೇಶವನ್ನು ಪಡೆದು ವ್ಯಾಪ್ತಿ ಆಧಾರದ ಮೇಲೆ ಪ್ರಕರಣವನ್ನು ವಿರಾಜಪೇಟೆ ಅಬಕಾರಿ ನಿರೀಕ್ಷಕರವರಿಗೆ ವಹಿಸಿ ಕೊಟ್ಟಿರುತ್ತೇನೆ.

ಪಾಟಿ ಸವಾಲು– ಕೆ.ಎಂ.ವಕೀಲರಿಂದ

ಈ ಮೊಕದ್ದಮೆಯಲ್ಲಿ ನಾನೇ ಸ್ವತ: ಫಿರ್ಯಾದುದಾರರಾಗಿದ್ದು, ಹಾಗೂ ಪಂಚಾಯಿತುದಾರರ ಸಮಕ್ಷಮ ಕೂಡ ನಾನೇ ಮಾಡಿರುತ್ತೇನೆ. ನ್ಯಾಯಾಲಯದ ಮುಂದೆ ಅಮಾನತುಪಡಿಸಿಕೊಂಡು ವಿದ್ಯಾಮಾನಗಳು ಈ ನ್ಯಾಯಾಲಯದ ಮುಂದೆ ಸಂಬಂಧಪಟ್ಟ ಅಧಿಕಾರಿಗಳು ಹಾಜರುಪಡಿಸಿರುವುದಿಲ್ಲ. ಸದರಿ ನ್ಯಾಯಾಲಯದ ಮುಂದೆ ಎಲ್ಲಾ ಪ್ರತಿಗಳು

ನಕಲುಗಳಾಗಿರುತ್ತವೆ. ಪಂಚನಾಮೆ ಕಾಲದಲ್ಲಿ ಮಹೇಂದ್ರನ ಮನೆಯವರಾಗಲಿ ಇತರೆಯವರಾಗಲಿ ಸಾಕ್ಷಿದಾರರಾಗಿರಲಿ ಮಾಡಿರುವುದಿಲ್ಲ.

ಮಾಹಿತಿ ಬಂದ ಮೇಲೆ ಯಾರಿಂದ ಬಂದಿರುತ್ತದೆ ಎಂಬ ಬಗ್ಗೆ ನಿಖರವಾಗಿ ನನ್ನ ಫಿರ್ಯಾದಿಯಲ್ಲಿ ತಿಳಿಸಿರುವುದಿಲ್ಲ. ಮಹಜರು ಮುಗಿದ ನಂತರ ಠಾಣೆಗೆ ಹಾಜರಾಗಿ ಕೇಸು ನೊಂದಾಯಿಸಿ ಕೊಂಡು ನಂತರ ಆರೋಪಿಗಳ ಸಹಿ ಸ್ವ–ಇಚ್ಛ ಹೇಳಿಕೆಯನ್ನು ಮಾಡಿಕೊಳ್ಳಲಾಯಿತು. ಪಂಚಾಯಿತುದಾರರುಗಳು ಸದರಿ ಗ್ರಾಮದ ಆಸುಪಾಸಿನ ವ್ಯಕ್ತಿಗಳಾಗಿರುತ್ತಾರೆ. ನಾವು ಸ್ಥಳಕ್ಕೆ ಹೋಗುವ ಮೊದಲೇ ಪಂಚಾಯಿತುದಾರರುಗಳು ಹಾಜರಿರುತ್ತಾರೆ. ಚಾಲಕ ಮತ್ತು ಆರೋಪಿಗಳಿಬ್ಬರು ಸೇರಿ ಸಾರಾಯಿ ಮಾರಾಟ ಮಾಡುವ ವ್ಯಕ್ತಿಗಳಾಗಿರುತ್ತಾರೆ. ಹಾಗೂ ಸದರಿ ವ್ಯಕ್ತಿಗಳು ಈ ದಂದೆಯಲ್ಲಿ ಪಾಲುಗೊಂಡಿರುತ್ತಾರೆ ಎಂದು ನಮೋದಿಸಿರುತ್ತೇನೆ. ನನಗೆ ಮಹಜರಿನ ಚಕ್ಕುಬಂದಿ ಬಗ್ಗೆ ಹೇಳಲು ಸಾಧ್ಯವಿಲ್ಲ. ಆದಿನ ಮಹಜರನ್ನು ನಮ್ಮ ಠಾಣಾ ಸಿಬ್ಬಂದಿ ಬರೆದಿರುತ್ತಾರೆ. ಅದರೆ ಅವರು ಯಾರೆಂದು ನನಗೆ ನೆನಪಿರುವುದಿಲ್ಲ. ಯಾವುದೇ ಚಾಲಕ ಸಾಮಾನ್ಯವಾಗಿ ಪ್ರಯಾಣಿಕರನ್ನು ತಮ್ಮ ಆಟೋದಲ್ಲಿ ಹತ್ತಿಸಿಕೊಳ್ಳುತ್ತಾರೆಂಬುದು ಸರಿ. ಅಮಾನತು ಪಡಿಸಿಕೊಂಡ ಮುದ್ದೆ ಮಾಲೀನ ಮೇಲೆ ಮುದ್ರಿಸಿರುವ ಅಕ್ಷರಗಳು ಅಸಲಿಯೋ ಅಥವಾ ನಕಲಿಯೋ ಎಂದು ಹೇಳಲು ಸಾಧ್ಯವಿಲ್ಲ. ನಾನು ಆ ದಿನ ಸ್ಥಳಕ್ಕೆ ಹೋಗಿರಲಿಲ್ಲ. ಯಾವುದೇ ತನಿಖೆಯನ್ನು ಕೈಗೊಂಡಿರಲಿಲ್ಲ, ಆರೋಪಿಗಳ ಮೇಲೆ ಸುಳ್ಳು ಮೊಕದ್ದಮೆ ಮಾಡಿರುವುದು ಸರಿಯಲ್ಲ. ಅದೇ ರೀತಿ ನಗರದಲ್ಲಿ ಸಂಚರಿಸುತ್ತಿದ್ದ ಆಟೋವನ್ನು ಮೊಕದ್ದಮೆಗೋಸ್ಕರ ನಿಗದಿಮಾಡಿದ್ದಾನೆಂದರೆ ಸರಿಯಲ್ಲ. ಆದಿನ ಆಟೋ ಚಾಲಕ ಯಾವುದೇ ಸಾರಾಯಿ ಪ್ಯಾಕೇಟುಗಳನ್ನು ಸಾಗಿಸುತ್ತಿರಲಿಲ್ಲ ಎನ್ನುವುದು ಸರಿಯಲ್ಲ. ಆರೋಪಿಗಳು ನಿಮ್ಮ ಮುಂದೆ ಸ್ವಇಚ್ಛೆ ಹೇಳಿಕೆಗಳನ್ನು ಕೊಟ್ಟಿದ್ದಾರೆಂದರೆ ಸರಿಯಲ್ಲ. ಈ ಕೇಸಿಗೆ ಸಂಬಂಧಪಟ್ಟ ಸುಳ್ಳು ಆರೋಪಗಳನ್ನು ಸೃಷ್ಟಿಸುತ್ತಿರುವುದು ಸರಿಯಲ್ಲ.

**ಪ್ರಾ. ಸಾ 2:** ಶ್ರೀ. ಸಿ.ಎಂ. ಧನಂಜಯ, ಪಿ.ಸಿ.ಸಂ:232, ಗೋಣಿಕೊಪ್ಪ ಠಾಣೆ ಇವರು ಪ್ರಕರಣದ ಮಹಜರು ಸಾಕ್ಷಿದಾರರು, ಇವರು ದಿ:26–11–2005 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ನುಡಿದಿರುತ್ತಾರೆ. ತಾನು ಗೋಣಿಕೊಪ್ಪ ಠಾಣೆಯಲ್ಲಿ ಜೂನ್–2000 ದಿಂದ ಆರಕ್ಷಕ ರಕ್ಷಕರಾಗಿ ಸೇವೆಯಲ್ಲಿ ಇರುತ್ತೇನೆ. ನಾನು ದಿ:18–10–2001ರಂದು ಗೋಣಿಕೊಪ್ಪ ಪೋಲಿಸ್ ಠಾಣೆ ಅಪರಾಧ ಸಂ:167/2001 ರ ಎಫ್.ಐ.ಆರ್‌ನ್ನು ಠಾಣಾಧಿಕಾರಿ ಶ್ರೀ.ಗುರುಬಸವರಾಜ್ ಇವರಿಂದ ಪಡೆದು ಅವರ ಸೂಚನೆ ಮೇರೆಗೆ ವಿರಾಜಪೇಟೆ ಜೆ.ಎಂ.ಎಫ್.ಸಿ ನ್ಯಾಯಾಲಯದಲ್ಲಿ ಒಪ್ಪಿಸಿ ಸ್ವೀಕೃತಿಯನ್ನು ಪಡೆದಿರುತ್ತೇನೆ. ಸದರಿ ಸ್ವೀಕೃತಿ ಪ್ರತಿಯು ನ್ಯಾಯಾಲಯದ ಮುಂದೆ ಹಾಜರುಪಡಿಸಲಾಗಿದ್ದು ಅದನ್ನು ನಾನು ಗುರುತಿಸಿದ್ದು **“**ಡಿಬ್ಲ್ಯು1**”** ಎಂದು ಗುರುತಿಸಲಾಗಿದೆ.

ಈ ಪ್ರಕರಣಕ್ಕೆ ಸಂಬಂಧಿಸಿ ಇತರೆ ಯಾವುದೇ ವಿಚಾರಗಳನ್ನು ನಾನು ತಿಳಿಸಿರುವುದಿಲ್ಲ.

**ಪಾಟೀ ಸವಾಲು:**

ಶ್ರೀ. ಕೆ.ಡಿ.ಡಿ. ವಕೀಲರು (ದಯಾನಂದ) ಇವರಿಂದ

ದಿನಾಂಕ:18–10–2001ರಂದು ಸಂಜೆ 5.00 ಗಂಟೆಗೆ ಸದರಿ ಅಪರಾಧದ ವರದಿಯನ್ನು ಠಾಣಾಧಿಕಾರಿಯವರಿಂದ ನ್ಯಾಯಾಲಯಕ್ಕೆ ಒಪ್ಪಿಸಲು ಪಡೆದಿರುತ್ತೇನೆ. ನಂತರ 6 ಗಂಟೆಗೆ 5 ನಿಮಿಷಕ್ಕೆ ಮಾನ್ಯ ನ್ಯಾಯಾದೀಶರ ಮುಂದೆ ಹಾಜರಾಗಿ ಸದರಿ ಅಪರಾದ ವರದಿಯನ್ನು ಒಪ್ಪಿಸಿ ನಾನು ಆದಿನ ಕೋರ್ಟ್ ಪಿ.ಸಿ. ಕರ್ತವ್ಯದಲ್ಲಿ ಇರುತ್ತೇನೆ. ನಾನು ಅಲ್ಲದೇ ಇತರೆ ಪೊಲೀಸ್ ಸಿಬ್ಬಂದಿಯವರು ಠಾಣೆಯಲ್ಲಿ ಇರುತ್ತಾರೆ. ನಾನು ಸದರಿ ವರದಿಯನ್ನು ಪಡೆದು ನ್ಯಾಯಾಲಯಕ್ಕೆ ಒಪ್ಪಿಸುವಲ್ಲಿ ಯಾವುದೇ ವಿಳಂಬ ಮಾಡಿರುವುದಿಲ್ಲ.

**ರಕ್ಷಣಾ ಸಾಕ್ಷಿ ಮುಖ್ಯವಿಚಾರಣೆ** :ಕೆ.ಡಿ.ಡಿ. ವಕೀಲರಿಂದ (ದಯಾನಂದ ವಕೀಲರು)

ಕೆ.ಜಿ.ನಾರಾಯಣ ತಂದೆ ಗೋಪಾಲನ್, ಗ್ರಾಮ ಲೆಕ್ಕಾಧಿಕಾರಿ ಕೈಕೇರಿ, ಆದ ನಾನು ಪ್ರಕರಣದಲ್ಲಿ ಜಪ್ತಾದ ವಾಹನ ಸಂ.ಕೆಎ–12–4006 ಆಟೋ ರಿಕ್ಷಾದ ಮಾಲೀಕರಾಗಿರುತ್ತೇನೆ. ನಾನು 1998 ಅಕ್ಟೋಬರ್ ತಿಂಗಳಿನಿಂದ ಆಟೋರಿಕ್ಷಾವನ್ನು ಇಟ್ಟುಕೊಂಡಿರುತ್ತೇನೆ. ಆಟೋವನ್ನು ಪ್ರಯಾಣಿಕರನ್ನು ಸಾಗಿಸುವ ಉದ್ದೇಶಕ್ಕಾಗಿ ಡ್ರೈವರ್‌ನನ್ನು ನೇಮಕ ಮಾಡಿಕೊಂಡು ಓಡಿಸುತ್ತಿದ್ದೆ. 2001ರಲ್ಲಿ ಅತಾವುಲ್ಲಾ ಎಂಬ ಡ್ರೈವರ್‌ನು ಸದರಿ ಆಟೋವನ್ನು ಓಡಿಸುತ್ತಿದ್ದನು ಬೆಳಿಗ್ಗೆ 8.00 ಗಂಟೆಗೆ ಆಟೋವನ್ನು ತೆಗೆದುಕೊಂಡು ಹೋಗಿ ರಾತ್ರಿ 8.00 ಗಂಟೆ ಒಳಗಡೆ ಆಟೋವನ್ನು ನನ್ನ ಮನೆಗೆ ತಂದು ನಿಲ್ಲಿಸಬೇಕು ಹಾಗೂ ದಿನ ಒಂದಕ್ಕೆ ರೂ.100/–ರಂತೆ ಬಾಡಿಗೆಯನ್ನು ನೀಡಿ ಮೌಖಿಕ ಒಪ್ಪಂದದಂತೆ ಚಾಲಕನನ್ನು ನೇಮಕ ಮಾಡಿಕೊಂಡಿರುತ್ತೇನೆ. ಅಂದಾಜು 1 ವರ್ಷದಿಂದ ಸದರಿ ಚಾಲಕನು ಸದರಿ ಆಟೋವನ್ನು ಓಡಿಸುತ್ತಿರುತ್ತಾರೆ. ಕಾನೂನು ಬಾಹಿರವಾಗಿ ಯಾವುದೇ ಕೆಲಸವನ್ನು ಮಾಡದೇ ಜನ ಸಾಮಾನ್ಯರ ಸಾಗಾಣಿಕೆಗೆ ಮಾತ್ರ ಬಳಸುವಂತೆ ಸದರಿ ಚಾಲಕನಿಗೆ ಮೌಖಿಕವಾಗಿ ನಿರ್ದೇಶನ ನೀಡಿ ಮೌಖಿಕ ಷರತ್ತಿನ ಮೇಲೆ ನೇಮಕ ಮಾಡಿಕೊಂಡಿರುತ್ತೇನೆ. ಈ ಘಟನೆ ನಡೆಯುವ ಮೊದಲು ಸದರಿ ಚಾಲಕನ ಮೇಲೆ ಯಾವುದೇ ಅಪವಾದವಿರುವುದಿಲ್ಲ. ಚಾಲಕನ ಬಗ್ಗೆ ನನಗೆ 2ವರ್ಷದಿಂದ ಪರಿಚಯವಿದ್ದುದರಿಂದ ಇವನನ್ನು ಸದರಿ ಆಟೋದ

ಚಾಲಕನಾಗಿ ನೇಮಿಸಿಕೊಂಡಿರುತ್ತೇನೆ. ನನಗೆ ಗೊತ್ತಿರುವಂತೆ ಆತನ ವಿರುದ್ದ ಯಾವುದೇ ಕ್ರಿಮಿನಲ್ ಮೊಕದ್ದಮೆ ನಡೆದಿರುವುದು ಗೊತ್ತಿರುವುದಿಲ್ಲ.

ಸದರಿ ಘಟನೆ ಬಗ್ಗೆ ನನಗೆ ಯಾವುದು ಗೊತ್ತಿಲ್ಲ ಮೊಕದ್ದಮೆ ದಾಖಲಾದ ನಂತರ ನನ್ನ ತಿಳುವಳಿಕೆಗೆ ಬಂದಿರುತ್ತದೆ. ಪ್ರಕರಣದ ಬಗ್ಗೆ ಚಾಲಕನನ್ನು ವಿಚಾರಿಸಲಾಗಿ ಇದರ ಬಗ್ಗೆ ನನಗೆ ಏನು ಗೊತ್ತಿರುವುದಿಲ್ಲ. ನಾನು ಪ್ರಯಾಣಿಕರನ್ನು ಕರೆದುಕೊಂಡು ಹೋಗಿ ವಾಪಸ್ಸು ಕರೆದುಕೊಂಡು ಬಂದಿರುತ್ತೇನೆ. ಆ ಸಂದರ್ಭದಲ್ಲಿ ಪೋಲಿಸರು ಆಟೋರಿಕ್ಷಾವನ್ನು ತಡೆದು ನಿಲ್ಲಿಸಿ ಅಕ್ರಮ ಸಾರಾಯಿ ಪ್ಯಾಕೇಟು ಸಾಗಾಣಿಕೆ ಮಾಡುತ್ತಿರುವುದಾಗಿ ಮೊಕದ್ದಮೆ ದಾಖಲು ಮಾಡಿರುತ್ತಾರೆ. ಇದರ ಬಗ್ಗೆ ನನಗೆ ಏನೂ ಗೊತ್ತಿರುವುದಿಲ್ಲ.

ನನ್ನ ಕುಟುಂಬದಲ್ಲಿ 12 ಜನ ಸದಸ್ಯರಿದ್ದು, ಸದರಿ ಆಟೋವನ್ನು ಇವರ ಜೀವನ ನಿರ್ವಹಣೆಗಾಗಿ ಆಟೋವನ್ನು ಬಾಡಿಗೆಗೆ ಓಡಿಸಲು ಚಾಲಕನಿಗೆ ಕೊಟ್ಟಿರುತ್ತೇನೆ. ಘಟನೆ ನಡೆಯುವ ಸಮಯದಲ್ಲಿ ನಾನು ಗ್ರಾಮ ಲೆಕ್ಕಾಧಿಕಾರಿಯಾಗಿ, ಹುದಿಕೇರಿ ಹೋಬಳಿ, ಬಿರುನಾಣಿ ವೃತ್ತದ ಬಳಿ ಕರ್ತವ್ಯ ನಿರ್ವಹಿಸುತ್ತಿದ್ದೇನು. ಆ ಸಂದರ್ಭದಲ್ಲಿ ನಾನು ಗೋಣಿಕೊಪ್ಪ ಟೌನಿನ ಪಾಲಿಬೆಟ್ಟ ರಸ್ತೆಯಲ್ಲಿ ಸ್ವಂತ ಮನೆಯಲ್ಲಿ ವಾಸವಾಗಿದ್ದೇನು. ನಾನು ದಿನಾ ಬೆಳಿಗ್ಗೆ 9.00 ಗಂಟೆಗೆ ಹೊರಟು ಕರ್ತವ್ಯ ನಿರ್ವಹಿಸಿ ಸಂಜೆ 6.00 ಗ0ಟೆಗೆ ಮನೆಗೆ ಹಿಂದಿರುಗುತ್ತಿದ್ದೆನು. ಸದರಿ ಘಟನೆ ನಡೆಯುವ ಸಂದರ್ಭದಲ್ಲಿ ನನ್ನ ತಮ್ಮನ ವಿವಾಹ ನಿಶ್ಚಯ ಕಾರ್ಯಕ್ರಮಕ್ಕಾಗಿ ದಿ:17–10–2001 ರಂದು ಕೇರಳಕ್ಕೆ ಹೋಗಿದ್ದು, ದಿ:19–10–2001 ರಂದು ವಾಪಸು ಬಂದಿರುತ್ತೇನೆ. ದಿ:18–10–2001 ರಂದು ನಡೆದ ಘಟನೆ ಬಗ್ಗೆ ನನಗೆ ಏನೂ ಗೊತ್ತಿರುವುದಿಲ್ಲ. ನಾನು ಈ ಪ್ರಕರಣದಲ್ಲಿ ನಿರ್ದೋಷಿಯಾಗಿದ್ದು, ನನ್ನ ಆಟೋರಿಕ್ಷಾವನ್ನು ನನಗೆ ಬಿಡುಗಡೆಗೊಳಿಸಿಕೊಡಬೇಕಾಗಿ ಕೋರಿಕೊಳ್ಳುತ್ತೇನೆ.

**ಪಾಟಿ ಸವಾಲು:** ಎ.ಡಿ.ಪಿ. ರವರಿಂದ

ನಾನು 1994 ರಿಂದ ಅಮ್ಮತ್ತಿಯಲ್ಲಿ 1997 ನೇ ಮೇ ತಿಂಗಳ ವರೆಗೆ ಗ್ರಾಮ ಲೆಕ್ಕಾದಿಕಾರಿಯಾಗಿ ಕೆಲಸ ಮಾಡುತ್ತಿದ್ದೇನೆ. ನಾನು ನನ್ನ ಸಂಸಾರ ಬೇರೆಯಾಗಿ 3 ವರ್ಷವಾಗಿರುತ್ತದೆ. ಪ್ರತಿ ವರ್ಷವೂ ಸರ್ಕಾರಕ್ಕೆ ಅಸ್ಥಿ ಮತ್ತು ಋಣ ಪಟ್ಟಿ ತಖ್ತೆಯನ್ನು ಸಲ್ಲಿಸುತ್ತಿದ್ದೇನೆ. ನಾನು ಸರ್ಕಾರಿ ನೌಕರನಾಗಿದ್ದು ಯಾವುದೇ ಗೃಹಪಯೋಗಿ, ವಾಹನಗಳಾಗಲಿ ಅಥವಾ ಇತರ ವಸ್ತುಗಳಾಗಲಿ ತೆಗೆದುಕೊಳ್ಳಬೇಕಾದರೆ ಸರ್ಕಾರದ ಅನುಮತಿ ಪಡೆದು ಕೊಳ್ಳಬೇಕೆಂದು ವಿದ್ಯಾವಂತರಾದ ನನಗೆ ತಿಳುವಳಿಕೆ ಇರುತ್ತದೆ. ವಾಹನವನ್ನು ಖರೀದಿಸಿದ ಬಗ್ಗೆ ಹಾಗೂ ಚಾಲಕನಿಗೆ ನೀಡಿದ ಬಗ್ಗೆ ಪ್ರತಿದಿನ ನಾನೂ ಯಾವುದೇ ಲೆಕ್ಕ ಜಮಾ ಮಾಡಿರುವುದಿಲ್ಲ. ನಾನೂ ಯಾವುದೇ ರಜೆ ಘೋಷಣೆ ಮಾಡಿಕೊಳ್ಳಲು ಸಂಬಂಧಪಟ್ಟ ಇಲಾಖೆಯಿಂದ ಪಡೆದುಕೊಂಡ ದಾಖಲಾತಿಗಳನ್ನು ಮಾನ್ಯ ನ್ಯಾಯಾಲಯದ ಮುಂದೆ ಹಾಜರುಪಡಿಸಿರುವುದಿಲ್ಲ. ನನ್ನ ಚಾಲಕನು ಯಾವುದೇ ಕಾನೂನು ಬಾಹಿರವಾಗಿ ಚಟುವಟಿಕೆಗಳನ್ನು ನಡೆಸಿರುವುದಿಲ್ಲ, ಹಾಗೂ ಸದರಿ ವಿಚಾರ ನನ್ನ ಗಮನಕ್ಕೆ ಬಂದಿದೆ ಎಂದರೆ ಸರಿಯಲ್ಲ. ವಾಹನದ ಮಾಲೀಕ ನಾನೇ ಎಂದು ಘೋಷಿಸಿಕೊಳ್ಳಲು ಮಾಲಿಕತ್ವದ ಬಗ್ಗೆ ಯಾವುದೇ ದಾಖಲಾತಿಗಳನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಿರುವುದಿಲ್ಲ.

ಆನಂತರ ಎ.ಡಿ.ಸಿ.ರವರ ಕೋರಿಕೆ ಮೇರೆಗೆ ಪಾಟಿ ಸವಾಲನ್ನು ಮುಂದೂಡಲಾಗಿದೆ.

ಪ್ರಕರಣವನ್ನು ಮತ್ತೆ ದಿ:22–11–2008, 2–12–2008 ರಂದು ಕರೆಯಲಾಯಿತು. ವಾಹನದ ಮಾಲೀಕರಾಗಲಿ ಅವರ ಪರ ವಕೀಲರಾಗಲಿ ಹಾಜರಿಲ್ಲದ ಕಾರಣ ವಾಹನದ ಮಾಲೀಕರಿಗೆ ಅಂತಿಮ ನೋಟಿಸ್ ನೀಡಲು ಪ್ರಾಧಿಕಾರದಲ್ಲಿ ತೀರ್ಮಾನಿಸಲಾಯಿತು ಸದರಿಯವರು ನೀಡಿರುವ ಬ್ಯಾಂಕ್ ಗ್ಯಾರೆಂಟಿ ಹಣವನ್ನು ಇನ್‌ವೋಕ್ ಮಾಡಿಕೊಂಡು ಚಿಕ್ಕಮಗಳೂರು ಕೊಡಗು ಗ್ರಾಮೀಣ ಬ್ಯಾಂಕ್, ಗೋಣಿಕೊಪ್ಪ ಇವರಿಂದ ದಿ:23–7–2009 ರಂದು ಡಿ.ಡಿ.ಯನ್ನು ತರೆಸಿಕೊಂಡು ದಿ:29–7–2009 ರಂದು ಆರ್.ಡಿ. ಖಾತೆಯಲ್ಲಿಡಲಾಗಿದೆ. ಪ್ರಕರಣವನ್ನು ದಿ:17–09–2009 ಕರೆಯಲಾಯಿತು. ವಾಹನದ ಮಾಲೀಕರು ಸಮಯಾವಕಾಶವನ್ನು ಕೋರಿರುತ್ತಾರೆ. ನಂತರ ದಿ:9–10–2009 ರಂದು ವಾಹನದ ಮಾಲೀಕರು ಮನವಿಯನ್ನು ಸಲ್ಲಿಸಿ ತಾನು ಅರ್ಥಿಕವಾಗಿ ತುಂಬಾ ಹಿಂದುಳಿದ ಕಾರಣ ಕೇಸು ನಡೆಸಲು ಶಕ್ತನಾಗಿರುವುದಿಲ್ಲ. ಆದುದರಿಂದ ಈಗಾಗಲೇ ಬ್ಯಾಂಕ್ ಗ್ಯಾರೆಂಟಿ ಹಣವನ್ನು ಇನ್‌ವೋಕ್ ಮಾಡಿರುವುದರಿಂದ ಇದೇ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನನ್ನ ಕೇಸನ್ನು ಮುಕ್ತಾಯಗೊಳಿಸಿಕೊಡಬೇಕೆಂದು ಕೋರಿರುತ್ತಾರೆ.

ಈ ಮೇಲ್ಕಂಡ ಹಿನ್ನೆಲೆಯಲ್ಲಿ ಪ್ರಾಧಿಕಾರದಲ್ಲಿ ವಿಮರ್ಶಿಸಲಾಗಿ ವಾಸ್ತವವಾಗಿ ಸದರಿ ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ವಾಹನವನ್ನು ಇಲಾಖೆಯ ವಶಕ್ಕೆ ತೆಗೆದುಕೊಂಡು ವಿಲೇವಾರಿ ಮಾಡಿದ್ದಲ್ಲಿ ವಾಹನದ ಮಾಲೀಕರು ಈಗಾಗಲೇ ನೀಡಿರುವ ಬ್ಯಾಂಕ್‌ಗ್ಯಾರೆಂಟಿ ಮೌಲ್ಯವು ದೊರೆಯುವ ಸಾದ್ಯತೆ ಇರುವುದಿಲ್ಲ. ಸದರಿ ಆಟೋರಿಕ್ಷಾವು 1998 ರ ಮಾದರಿಯಾಗಿದ್ದು, ಅಂದಿನಿಂದ ವಾಹನದ ಡಿಪ್ರಿಸಿಯೇಶನ್ ಬೆಲೆಯನ್ನು ಲೆಕ್ಕಾಚಾರ ಮಾಡಿ ರೂ.24,000/– ಕ್ಕೆ ನಿಗದಿಪಡಿಸಿರುತ್ತಾರೆ. ಅದರಂತೆ ಬ್ಯಾಂಕ್ ಗ್ಯಾರೆಂಟಿಯನ್ನು ಪಡೆದುಕೊಳ್ಳಲಾಗಿರುತ್ತದೆ. ಆದುದರಿಂದ ಸದರಿ ಬ್ಯಾಂಕ್‌ಗ್ಯಾರೆಂಟಿ ಹಣ (ಆರ್.ಡಿ. ಖಾತೆ)ವನ್ನು

ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವಾಗಿರುತ್ತದೆ. ಏಕೆಂದರೆ ಸದರಿ ವಾಹನದ ಮಾಲೀಕರಿಗೆ ಸೇರಿದ ಆಟೋರಿಕ್ಷಾದಲ್ಲಿ ಚಾಲಕನು ಅಕ್ರಮ ಸಾರಾಯಿ ಪ್ಯಾಕೇಟುಗಳನ್ನು ತೆಗೆದುಕೊಂಡು ಹೋಗಿರುವುದು ಧೃಡವಾಗಿರುತ್ತದೆ. ಅದುದರಿಂದ ವಾಹನದ ಮಾಲೀಕರು ನೀಡಿರುವ ಬ್ಯಾಂಕ್ ಗ್ಯಾರೆಂಟಿ (ಆರ್.ಡಿ.ಖಾತೆ) ಹಣವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಹಾಗೂ ಯೋಗ್ಯವೆಂದು ತೀರ್ಮಾನಿಸಿ ಈ ಕೆಳಗಿನಂತೆ ಅದೇಶ.

**ಆದೇಶ ಸಂ: ಇಎಕ್ಸ್ ಇ: 3:ಡಿಟಿಸಿಆರ್ ಎಂ:333:2001–02, ದಿ:29–12–2009**

ಸಿ.ಎಲ್.ಜಯರಾಮ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಅಫ್ ಎಕ್ಸೈಸ್. ಕೊಡಗು ಜಿಲ್ಲೆ, ಮಡಿಕೇರಿಯಾದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ 43 ಬಿ ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಕ್ಷಕ ಉಪ ನಿರೀಕ್ಷಕರು, ಗೋಣಿಕೊಪ್ಪ ಠಾಣೆ ಇವರ ಮೊ.ಸಂ:167/2001, ದಿ:18–10–2001 ರಲ್ಲಿ ಅಕ್ರಮವಾಗಿ 375 X 100 ಮಿಲಿ ಸಾರಾಯಿ ಪ್ಯಾಕೇಟುಗಳನ್ನು ಮಾಡುತ್ತಿದ್ದ ಆಟೋರಿಕ್ಷಾ ಸಂ: ಕೆಎ–12–4006 ರಲ್ಲಿ ಸಾಗಾಣಿಕೆ ಮಾಡಿರುವುದರಿಂದ ಕಾನೂನು ವಿರುದ್ದವಾಗಿ ಈ ಕೃತ್ಯದಲ್ಲಿ ಬಳಸಿದ ಆಟೋ ರಿಕ್ಷಾ ಸಂ: ಕೆಎ–12–4006 ರ ಮದ್ಯಂತರ ಬಿಡುಗಡೆ ಸಮಯದಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿಗದಿ ಪಡಿಸಿದ ಮೌಲ್ಯಕ್ಕೆ ಸಮನಾಗಿ ನೀಡಿರುವ ಬ್ಯಾಂಕ್ ಗ್ಯಾರೆಂಟಿ (ಆರ್.ಡಿ.ಖಾತೆಯಲ್ಲಿ) ರೂ.24000/ ಹಣವನ್ನು ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲಾಗಿದೆ.

ಈ ಅದೇಶವನ್ನು ದಿ:23–12–2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಅದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ಸಿ.ಎಲ್.ಜಯರಾಮ್,**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

**ಅನುಬಂಧ**

**ಅನುಬಂಧ–1**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ

ಪ್ರಾ.ಸಾ.1:ಶ್ರೀ ಹೆಚ್.ಗುರುಬಸವರಾಜು ಆರಕ್ಷಕ ಉಪನಿರೀಕ್ಷಕರು, ಗೋಣಿಕೊಪ್ಪ ಠಾಣೆ
ಪ್ರಾ.ಸಾ.2:ಶ್ರೀ ಧನಂಜಯ, ಪಿ.ಸಿ–232 , ಗೋಣಿಕೊಪ್ಪ ಠಾಣೆ.

**ಅನುಬಂಧ–2**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು

1)ನಿಶಾನೆ ಪಿ1:ಮಹಜರು ಪ್ರತಿಯೊಂದಿಗಿನ ನಿವೇದನ ಪತ್ರ.
2) ನಿಶಾನೆ ಪಿ1ಎ:ಅದರ ಮೇಲಿನ ಸಹಿ
1) ನಿಶಾನೆ ಪಿ2: ಸ್ಥಳ ಮಹಜರು
4) ನಿಶಾನೆ ಪಿ2ಎ:ಅದರ ಮೇಲಿನ ಸಹಿ
5) ನಿಶಾನೆ ಪಿ3:ಸ್ವೊತು ಸ್ವಾದೀನ ಮಹಜರು
6) ನಿಶಾನೆ ಪಿ3ಎ:ಅದರ ಮೇಲಿನ ಸಹಿ
7) ನಿಶಾನೆ ಪಿ4 ರಿಂದ 6ಎ:ಆರೋಪಿಗಳ ಹೇಳಿಕೆ ಮತ್ತು ಅದರಲ್ಲಿನ ಸಹಿ
8) ನಿಶಾನೆ ಪಿ7:ಪ್ರಥಮ ವರ್ತಮಾನ ವರದಿ
9) ನಿಶಾನೆ ಪಿ7ಎ:ಅದರಲ್ಲಿನ ಸಹಿ

**ಅನುಬಂಧ–3**

ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲಾತಿಗಳು
ಯಾವುದು ಇಲ್ಲ

**ಸಿ.ಎಲ್.ಜಯರಾಮ್,**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್.36

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ ಮಡಿಕೇರಿರವರ ನ್ಯಾಯಾಲಯ**
**ಆದೇಶ ಸಂ:ಇಎಕ್ಸ್‌ಇ:ಡಿಟಿಸಿಆರ್:29/08–09, ದಿನಾಂಕ:19ನೇ ಜನವರಿ, 2010**

**ಸಿ.ಎಲ್.ಜಯರಾಮ್,**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್‌ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

**ಪಿರ್ಯಾದುದಾರರು** **ವಿರುದ್ಧ** **ಅರ್ಜಿದಾರರು/ಆರೋಪಿಗಳು**

ಆರಕ್ಷಕ ಉಪ ನಿರೀಕ್ಷಕರು,
ನಾಪೋಕ್ಲು ಠಾಣೆ,
ಮಡಿಕೇರಿ ಗ್ರಾಮಾಂತರ.

ಕುಟ್ಟಂಡ ನಂದ ತಂದೆ ಉತ್ತಯ್ಯ,
ಆಟೋ ಚಾಲಕ,
ಕುಂಬಳದಾಳು ಗ್ರಾಮ, ಮಡಿಕೇರಿ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು**: ದಿನಾಂಕ21–04–08ರಂದು ಸಮಯ 17.15 ಗಂಟೆಗೆ ಆರಕ್ಷಕ ಉಪ ನಿರೀಕ್ಷಕರು ನಾಪೋಕ್ಲು ಠಾಣೆಯಲ್ಲಿರುವಾಗ್ಗೆ ನಾಪೋಕ್ಲು ಕಡೆಯಿಂದ ಕುಂಬಳದಾಳು ಕಡೆಗೆ ಒಂದು ಆಟೋ ರಿಕ್ಷಾದಲ್ಲಿ ಅಕ್ರಮ ಮದ್ಯ ಮಾರಾಟ ಮಾಡುತ್ತಿದ್ದಾರೆ ಎಂದು ದೊರೆತ ಖಚಿತ ವರ್ತಮಾನದ ಮೇರೆಗೆ ಆರಕ್ಷಕ ಉಪ ನಿರೀಕ್ಷಕರು ಮತ್ತು ಸಿಬ್ಬಂದಿಗಳೊಂದಿಗೆ ಪಂಚರನ್ನು ಕರೆದುಕೊಂಡು ಹೋಗುತ್ತಿರುವಾಗ್ಗೆ ಚೆರಿಯಪರಂಬು ಜೆಂಕ್ಷನ್ ಬಳಿ ಒಂದು ಆಟೋ ಮುಂದೆ ಹೋಗುತ್ತಿದ್ದು, ಇದನ್ನು ಬೆನ್ನಟ್ಟಿ ಹಿಡಿದು ನಿಲ್ಲಿಸಿ ಆಟೋವನ್ನು ಪರಿಶೀಲನೆ ಮಾಡಲಾಗಿ ಆಟೋ ನಂ.CRQ-9033 ಆಗಿದ್ದು, ಆಟೋರಿಕ್ಷಾದೊಳಗಡೆ ಒಂದು ಬಿಳಿಬಣ್ಣದ ಎರಡು ಪ್ಲಾಸ್ಟಿಕ್ ಬ್ಯಾಗ್ ಇದ್ದು, ಬ್ಯಾಗನ್ನು ಪರಿಶೀಲಿಸಲಾಗಿ ಅದರ ಒಳಗಡೆ ವಿಸ್ಕಿ ಹಾಗೂ ರಮ್‌ನ ಕ್ವಾಟರ್ ಬಾಟಲ್‌ಗಳಿದ್ದು ಈ ಬಗ್ಗೆ ಚಾಲಕನಾದ ಕುಟ್ಟಂಡ ನಂದ ಅಲಿಯಾಸ್ ನಾಣಯ್ಯ, ಪ್ರಾಯ 53/08ವರ್ಷ ಕುಂಬಳದಾಳು ಗ್ರಾಮರವರನ್ನು, ಇದನ್ನು ಸಾಗಿಸಲು ಸರ್ಕಾರದ ಪರವಾನಿಗೆ ಇದೆಯೋ ಎಂದು ಕೇಳಿದಾಗ ಇಲ್ಲ ಎಂದು ತಿಳಿಸಿದ ಮೇರೆ ಸದರಿ ಬಾಟಲಿಗಳನ್ನು ಪಂಚರ ಸಮಕ್ಷಮ ಪರಿಶೀಲನೆ ಮಾಡಲಾಗಿ 16 ಕ್ವಾರ್ಟರ್ ಬಾಟಲಿಗಳಲ್ಲಿ ಶಾಟ್ ವಿಸ್ಕಿ ಮತ್ತು 24x180ml ನ US.XXX ರಮ್‌ಗಳ ಬಾಟಲಿಗಳಿದ್ದು ಒಟ್ಟು 40x180 ಎಂಎಲ್ ಮದ್ಯವಿದ್ದು ಇವುಗಳ ಮುಚ್ಚಳದ ಮೇಲೆ ಕರ್ನಾಟಕ ಅಬಕಾರಿ ಕಮೀಷನರ್ ಎಂದು ಲೇಬಲ್ ಅಂಟಿಸಿರುತ್ತದೆ. ಸದರಿ ಒಂದೊಂದು ಬಾಟಲಿಗಳನ್ನು ತೆಗೆದು ರಾಸಾಯನಿಕ ಪರೀಕ್ಷೆಗೆ ಕಳುಹಿಸಿಕೊಡುವ ಬಗ್ಗೆ ಮಾದರಿಗಾಗಿ ತೆಗೆದು ಬಾಟಲಿನ ಮುಚ್ಚಳದ ಮೇಲೆ ಬಿಳಿಬಟ್ಟೆ ಸುತ್ತಿ ಎನ್‌ಡಿಪಿಎಸ್ ಎಂದು ಅರಗಿನಿಂದ ಸೀಲ್ ಮಾಡಿ ಪಂಚರ ಸಹಿ ಮಾಡಿದ ಚೀಟಿಯನ್ನು ಅಂಟಿಸಲಾಗಿ ಉಳಿದ ಬಾಟಲಿಗಳನ್ನು ವಶಕ್ಕೆ ತೆಗೆದುಕೊಂಡಿರುತ್ತಾರೆ. ಆರೋಪಿಯು ರಹದಾರಿ ಇಲ್ಲದೆ ಮದ್ಯವನ್ನು ಮಾರಾಟ ಮಾಡಲು ಸಾಗಾಟ ಮಾಡುತ್ತಿದ್ದುದು ಕಲಂ 34,43(ಎ) ಕೆಇ ಆಕ್ಟ್ ಪ್ರಕಾರ ಅಪರಾಧವಾಗಿರುವುದರಿಂದ ಆರೋಪಿ ಕುಟ್ಟಂಡ ನಂದ ಅಲಿಯಾಸ್ ನಾಣಯ್ಯ ಇವರ ವಿರುದ್ಧ ಆರಕ್ಷಕ ಉಪ ನಿರೀಕ್ಷಕರ ಪ್ರಕರಣ ಸಂಖ್ಯೆ:45/2008 ದಿನಾಂಕ21–4–08ರಂತೆ ಪ್ರಕರಣ ದಾಖಲು ಮಾಡಿಕೊಂಡು ಆರೋಪಿಯನ್ನು ದಸ್ತಗಿರಿ ಮಾಡಿ ಮದ್ಯ ಮತ್ತು ಆಟೋರಿಕ್ಷಾ ನಂ.CRQ-9033ರನ್ನು ಸ್ವಾಧೀನ ಪಡಿಸಿಕೊಂಡಿರುತ್ತಾರೆ. ನಂತರ ಮುಂದಿನ ಕ್ರಮದ ಬಗ್ಗೆ ಅಬಕಾರಿ ನಿರೀಕ್ಷಕರು, ಮಡಿಕೇರಿ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಸದರಿ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ನಿರೀಕ್ಷಕರು, ಮಡಿಕೇರಿ ವಲಯರವರು ತನಿಖೆಯನ್ನು ಪ್ರಾರಂಭಿಸಿ ವಶಪಡಿಸಿಕೊಂಡ 23 x 180ml UAS XXX ರಮ್‌ನಿಂದ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ ಮದ್ಯವನ್ನು ಸರ್ಕಾರದ ಅಧಿಸೂಚನೆ ಸಂ:FD.06. ಪಿಇಎಸ್/2007 ದಿನಾಂಕ13–07–07ರಲ್ಲಿ ವಶಪಡಿಸಿಕೊಂಡ ಅಬಕಾರಿ ಮಾದಕ ಪದಾರ್ಥಗಳನ್ನು ನಾಶಪಡಿಸಲು ಸೂಚಿಸಿರುವುದರಿಂದ ಸದರಿ 23 x180ml ಮದ್ಯದಿಂದ ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿಯನ್ನು ಹೊರತುಪಡಿಸಿ ಉಳಿದ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಅದೇಶ ನೀಡಬೇಕಾಗಿ ಅಬಕಾರಿ ನಿರೀಕ್ಷಕರ ಪತ್ರ ಸಂ:ಇಎಕ್ಸ್‌ಇ:ಎಂಡಿಕೆ:ಸಿಆರ್‌ಎಂ:8/08–09 ದಿನಾಂಕ14–5–2009ರಂದು ಕೋರಿಕೊಂಡ ಮೇರೆ ದಿನಾಂಕ15–6–2009ರಂದು ಅದೇಶ ಸಂ:ಇಎಕ್ಸ್‌ಇ:ಸಿಆರ್‌ಎಂ:19/08–09ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಲಾಗಿರುತ್ತದೆ.

ದಿನಾಂಕ17–12–2008ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಕೊಡಗು ಜಿಲ್ಲೆ ಮಡಿಕೇರಿ ಇವರಿಗೆ ಈ ಕಛೇರಿಯ ಸಮಸಂಖ್ಯೆಯಲ್ಲಿ ಪತ್ರ ಬರೆಯಲಾಗಿದ್ದು ಅವರಿಂದ ವಾಹನದ ಅಧಿಕೃತ ಮಾಲೀಕರ ವಿಳಾಸವನ್ನೊಳಗೊಂಡ ಬಿ–ಎಕ್ಸ್‌ಟ್ರಾಕ್ಟ್‌ನ್ನು ಕೋರಲಾಗಿದ್ದು ಅವರಿಂದ ದಿನಾಂಕ22–12–08ರ ಪತ್ರ ಸಂ:ಪ್ರ.ಸ.ಅ.ಮ:ಸಿಆರ್‌ಕ್ಯೂ: 9033/08–09ರ ಪತ್ರದಲ್ಲಿ

ಸದರಿ ವಾಹನವು ಸೇರ್ಪಡೆಗೊಂಡಿರುವುದಿಲ್ಲ ಎಂದು ತಿಳಿಸಿರುತ್ತಾರೆ. ನಂತರ ಅಬಕಾರಿ ನಿರೀಕ್ಷಕರು ಸದರಿ ವಾಹನದ ಮಾಲೀಕರನ್ನು ಪತ್ತೆಹಚ್ಚಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಪುತ್ತೂರು ಮತ್ತು ಮಂಗಳೂರು ಇವರಿಗೆ ದಿನಾಂಕ6–2–09ರಂದು ಪತ್ರ ಮುಖೇನ ಬಿ–ಎಕ್ಸ್‌ಟ್ರಾಕ್ಟ್ ಕೋರಿರುತ್ತಾರೆ. ಅವರಿಂದ ಯಾವುದೇ ವರದಿಯು ಬಂದಿರುವುದಿಲ್ಲ. ಮತ್ತೊಮ್ಮೆ ಅವರಿಗೆ ದಿನಾಂಕ10–11–09ರಂದು ಪತ್ರ ಬರೆಯಲಾಗಿದ್ದು ಅವರಿಂದ ಯಾವುದೇ ಉತ್ತರ ಬಾರದಿರುವ ಕಾರಣ ಮತ್ತು ಸದರಿ ಪ್ರಕರಣದ ಕಡತದಲ್ಲಿ ಪ್ರಕರಣದ ಆರೋಪಿಯು ವಾಹನದ ಚಾಲಕ ಹಾಗೂ ಮಾಲೀಕ ಎಂದು ಪೋಲೀಸ್ ಅಧಿಕಾರಿಗಳು ನಮೂದಿಸಿದ್ದು ಈ ಬಗ್ಗೆ ಆರೋಪಿಯ ಬಳಿ ಅಬಕಾರಿ ನಿರೀಕ್ಷಕರು ಖುದ್ದಾಗಿ ಹೋಗಿ ವಿಚಾರಿಸಲಾಗಿ ತಾನು ಸದರಿ ವಾಹನವನ್ನು ಬಾಡಿಗೆ ಪಡೆದಿರುವುದಾಗಿಯೂ, ತನಗೂ ವಾಹನಕ್ಕೂ ಯಾವುದೇ ಸಂಬಂಧವಿಲ್ಲವೆಂದು ಮೌಖಿಕವಾಗಿ ತಿಳಿಸಿರುವುದಾಗಿ ಈ ಬಗ್ಗೆ ಆತನಲ್ಲಿ ಲಿಖಿತವಾಗಿ ವರದಿ ಸಲ್ಲಿಸಲು ಸೂಚಿಸಿದರೂ ಈವರೆಗೆ ಆತನು ಲಿಖಿತ ವರದಿ ನೀಡಿರುವುದಿಲ್ಲವಾಗಿ ತಿಳಿಸಿರುತ್ತಾರೆ. ಅಲ್ಲದೆ ಆಟೋರಿಕ್ಷಾವನ್ನು ಸ್ವಾಧೀನಪಡಿಸಿಕೊಂಡು ಅಂದಾಜು ಒಂದು ವರ್ಷ ಮೇಲಾಗಿದ್ದು ಈವರೆಗೂ ವಾಹನದ ಮಾಲೀಕತ್ವವನ್ನು ಸಾಭೀತುಪಡಿಸುವಲ್ಲಿ ಮಾಲೀಕರಾಗಲಿ/ ಸಂಬಂಧಪಟ್ಟವರಾಗಲಿ ಮುಂದೆ ಬಾರದ ಕಾರಣ ಸದರಿ ವಾಹನವನ್ನು ಅಕ್ರಮವಾಗಿ ಮದ್ಯವನ್ನು ಸಾಗಿಸಲು ಬಳಸಲಾಗಿತ್ತೆಂದು ಮೇಲ್ನೋಟಕ್ಕೆ ಸಾಭೀತಾಗಿರುವುದರಿಂದ ಹಾಗೂ ಸದರಿ ವಾಹನವನ್ನು ತೆರೆದ ಪ್ರದೇಶದಲ್ಲಿ ಯಾವುದೇ ಭದ್ರತೆ ಇಲ್ಲದೆ ನಿಲ್ಲಿಸಿರುವುದರಿಂದ ಇದರ ಮೌಲ್ಯವು ದಿನದಿಂದ ದಿನಕ್ಕೆ ಕಡಿಮೆಯಾಗುವ ಸಾಧ್ಯತೆಯಿರುವುದರಿಂದ ಸದರಿ ವಾಹನವನ್ನು ವಾರಸುದಾರರಿಲ್ಲದ ವಾಹನವೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯಾವುದೇ ಪ್ರಕರಣವನ್ನು ದಾಖಲು ಮಾಡುವಲ್ಲಿ ಆರೋಪಿಗಳು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ವಾಹನವನ್ನು ಜಪ್ತು ಮಾಡಲಾದ ಒಂದು ತಿಂಗಳೊಳಗಾಗಿ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನುಬದ್ಧ ದಾಖಲಾತಿಗಳೊಂದಿಗೆ ನಿರೀಕ್ಷಕರ ಕಛೇರಿಗಾಗಲಿ, ಅಥವಾ ಪ್ರಾಧಿಕಾರಕ್ಕಾಗಲಿ ಅರ್ಜಿ ಸಲ್ಲಿಸದಿದ್ದಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ. ಆದುದರಿಂದ 43(ಬಿ)ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಲು ಸಾಧ್ಯವಾಗದ ಕಾರಣ ಸದರಿ ಆಟೋ ರಿಕ್ಷಾ ಸಂಖ್ಯೆ CRQ-9033ರನ್ನು ವಾರಸುದಾರರಿಲ್ಲದ ಸ್ವತ್ತೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ ಮತ್ತು ಅಬಕಾರಿ ನಿರೀಕ್ಷಕರ ಕೋರಿಕೆಯಂತೆ ಸದರಿ ವಾಹನವನ್ನು ಯಾವುದೇ ಭದ್ರತೆಯಿಲ್ಲದೆ ತೆರೆದ ಪ್ರದೇಶದಲ್ಲಿ ನಿಲ್ಲಿಸಿದ್ದು ಕೊಡಗಿನ ಹವಾಮಾನದ ವೈಪರೀತ್ಯಕ್ಕೆ ಇನ್ನೂ ಹೆಚ್ಚುಸಮಯ ನಿಲ್ಲಿಸಿದಲ್ಲಿ ಸರ್ಕಾರಕ್ಕೆ ಬರುವ ಆದಾಯವು ಕಡಿಮೆಯಾಗುವ ಸಾಧ್ಯತೆಯಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಪ್ರಾಧಿಕಾರದಲ್ಲಿ ತೀರ್ಮಾನಿಸಲಾಗಿ ಈ ಕೆಳಕಂಡ ಆದೇಶ.

**ಆದೇಶ ಸಂ:ಇಎಕ್ಸ್‌ಇ:ಡಿಟಿಸಿಆರ್:29/08–09 ದಿನಾಂಕ:19ನೇ ಜನವರಿ, 2010**

**ಸಿ.ಎಲ್.ಜಯರಾಮ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ** ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ 43(ಎ)ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, 43(ಬಿ)ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಲು ಸಾಧ್ಯವಾಗದ ಕಾರಣ ಆರಕ್ಷಕ ಉಪ ನಿರೀಕ್ಷಕರು ನಾಪೋಕ್ಲು ಠಾಣೆ ಇವರ ಮೊಕದ್ದಮೆ ಸಂ:45/08 ದಿನಾಂಕ21–04–08ರಲ್ಲಿ ಜಪ್ತು ಪಡಿಸಿರುವ ವಾಹನ ಆಟೋ ರಿಕ್ಷಾ ಸಂಖ್ಯೆ CRQ-9033ರನ್ನು ವಾರಸುದಾರರಿಲ್ಲದ ಸ್ವತ್ತೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ 43(ಸಿ)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಸದರಿ ಮುಟ್ಟುಗೋಲಾದ ವಾಹನವನ್ನು ಈ ಆದೇಶದ 30 ದಿನಗಳ ನಂತರ ಕರ್ನಾಟಕ ಅಬಕಾರಿ(ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ) ನಿಯಮ 1967ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸುವುದಾಗಿ ಇಂದು ಅಂದರೆ 19–01–2010ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್.146

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ ಮಡಿಕೇರಿರವರ ನ್ಯಾಯಾಲಯ**

**ಆದೇಶ ಸಂ:ಇಎಕ್ಸ್ಇ:ಡಿಟಿಸಿಆರ್:47/08–09, ದಿನಾಂಕ:24ನೇ ಫೆಬ್ರವರಿ, 2010**

**ಸಿ.ಎಲ್.ಜಯರಾಮ್,**

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

| **ಪಿರ್ಯಾದುದಾರರು** | **ವಿರುದ್ಧ** | **ಅರ್ಜಿದಾರರು/ಆರೋಪಿಗಳು** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ಶನಿವಾರಸಂತೆ ಪೋಲೀಸ್ ಠಾಣೆ,<br>ಶನಿವಾರಸಂತೆ. | | 1) ಡಿ.ಎಸ್.ನಟೇಶ@ನಟ ತಂದೆ ಪೌತಿ ಸಣ್ಣಪ್ಪಶೆಟ್ಟಿ ಜಾಗೇನಹಳ್ಳಿ ಗ್ರಾಮ,<br>2) ನವೀನ ತಂದೆ ಡೋಬಿ ಪ್ರಕಾಶ್, ಮಾರುತಿ ಓಮ್ನಿ ಚಾಲಕ ಸಂ: ಕೆಎ–20 ಎಂ–8484, ಒಡೆಯನಪುರ ಗ್ರಾಮ.<br>3) ವಿ.ಪಿ.ಮಹೇಶ್ ತಂದೆ ಪುಟ್ಟಶೆಟ್ಟಿ, ಚಾಲಕ ವೃತ್ತಿ, ಗೋಪಾಲಪುರ ಗ್ರಾಮ.<br>4) ಕೃಷ್ಣಪ್ಪ, ವಿಳಾಸ ತಿಳಿದಿರುವುದಿಲ್ಲ.<br>5) ಡಿ.ಎಸ್.ಸುರೇಶ್ ತಂದೆ ಪೌತಿ ಸಣ್ಣಪ್ಪ ಶೆಟ್ಟಿ ವ್ಯವಸಾಯ ವೃತ್ತಿ, ಜಾಗೇನಹಳ್ಳಿ ಗ್ರಾಮ. |

**ಪ್ರಕರಣದ ಮುಖ್ಯಾಂಶಗಳು:** ದಿನಾಂಕ17–01–08ರಂದು ಸಮಯ ಸಂಜೆ 6.45 ಗಂಟೆಗೆ ಶನಿವಾರಸಂತೆ ಪೋಲೀಸ್ ಠಾಣಾ ಸರಹದ್ದಿನ ಮುಳ್ಳೂರು ಗ್ರಾಮದ 'ಕೆರೆಯ ಹತ್ತಿರ ಶನಿವಾರಸಂತೆ ಕಡೆಯಿಂದ ಕೆಎ–13 ಹೆಚ್–1878ರ ಸುಝುಕಿ ಮೋಟಾರು ಬೈಕಿನಲ್ಲಿ ಮುಳ್ಳೂರು ಗ್ರಾಮದ ವಾಸಿ ಸಂತೋಷ್ ಎಂಬುವವರು ಮನೆಗೆ ಹೋಗುತ್ತಿರುವಾಗ ಮುಳ್ಳೂರು ಕಡೆಯಿಂದ ಶನಿವಾರಸಂತೆ ಕಡೆಗೆ ಕೆಎ–20 ಎಂ–8484ರ ಮಾರುತಿ ಓಮ್ನಿ ಕಾರನ್ನು ಅದರ ಚಾಲಕ ಅತೀ ವೇಗ ಮತ್ತು ಅಜಾಗರೂಕತೆಯಿಂದ ಓಡಿಸಿಕೊಂಡು ಬಂದು ಬೈಕಿಗೆ ಡಿಕ್ಕಿಹೊಡೆಸಿ ಬೈಕ್ ಸವಾರ ಸಂತೋಷ್ ಎಂಬುವವರಿಗೆ ರಕ್ತ ಗಾಯಪಡಿಸಿ ಸ್ಥಳದಲ್ಲಿಯೇ ವಾಹನವನ್ನು ಬಿಟ್ಟು ಓಡಿಹೋಗಿದ್ದು, ಸದರಿ ಕಾರಿನಲ್ಲಿ ಜಾಗೇನಹಳ್ಳೀ ಗ್ರಾಮದ ಸಣ್ಣಪ್ಪಶೆಟ್ಟಿ ರವರ ಮಗ ಪ್ರಾಯ 31ರ ನಟೇಶ @ ನಟ ಎಂಬುವವರನ್ನು ಗ್ರಾಮಸ್ಥರು ಸ್ಥಳದಲ್ಲಿಯೇ ಹಿಡಿದುಕೊಂಡು ಗಾಯಾಳುವಿನ ತಂದೆ ಮುಳ್ಳೂರು ಗ್ರಾಮದ ಕೊಂಗೇಗೌಡರ ಮಗ ಪ್ರಾಯ 65ರ ಅಪ್ಪಯ್ಯರವರು ನೀಡಿದ ದೂರಿನ ಸಂಬಂಧ ಠಾಣಾ ಮೊಕದ್ದಮೆ ಸಂಖ್ಯೆ:6/2008 ವಿಧಿ 270,337 ಐಪಿಸಿ ರೀತಿಯ ಕೇಸು ದಾಖಲಾಗಿದ್ದು ಈ ವಿಚಾರವನ್ನು ಠಾಣಾ ಉಸ್ತುವಾರಿಯಲ್ಲಿದ್ದ ಮುಖ್ಯ ಕಾಬೀಲ ಸಂಖ್ಯೆ:175 ಹರೀಶ್ ಎಂಬುವವರ ದೂರವಾಣಿಯ ಮೂಲಕ ತಿಳಿಸಿದ ಮೇರೆಗೆ ಆರಕ್ಷಕ ಉಪ ನಿರೀಕ್ಷಕರು ಮತ್ತು ಸಿಬ್ಬಂದಿಯವರು ಪೋಲೀಸ್ ಇಲಾಖಾ ಜೀಪಿನಲ್ಲಿ ಸ್ಥಳಕ್ಕೆ ಹೋಗಿ ಮುಳ್ಳೂರು ಕಡೆಯಿಂದ ಗೋಪಾಲಪುರ ಕಡೆಗೆ ಬರುವ ರಸ್ತೆಯ ಬಲಭಾಗದ ಜಾಗೇನಹಳ್ಳಿ ಗ್ರಾಮದ ಮಾಲತೇಶ್ ರವರ ಕಾಫಿ ತೋಟದ ಬೇಲಿಗೆ ಒತ್ತಾಗಿ ಅಪಘಾತ ಪಡಿಸಿದ ಕೆಎ–20 ಎಂ–8484ರ ಮಾರುತಿ ಓಮ್ನಿ ಕಾರು ನಿಂತಿದ್ದು ಸ್ಥಳದಲ್ಲಿ ಪರಿಶೀಲಿಸಿದಾಗ ಕಾರಿನೊಳಗೆ ಅಂದಾಜು 35ಲೀ. ತುಂಬಿಸುವ ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನುಗಳಿದ್ದು ಅವುಗಳಲ್ಲಿ ಸ್ಪಿರಿಟ್ ತುಂಬಿಸಿ ಮುಚ್ಚಳಕ್ಕೆ ಬಟ್ಟೆ ಸುತ್ತಿರುವುದು ಕಂಡು ಬಂದಿರುತ್ತದೆ. ಸದರಿ ವಾಹನದಲ್ಲಿ ಸ್ಪಿರಿಟನ್ನು ಅಕ್ರಮವಾಗಿ ಸಾಗಿಸುತ್ತಿದ್ದ ಜಾಗೇನಹಳ್ಳಿ ಗ್ರಾಮದ ನಟೇಶ ಎಂಬುವವರನ್ನು ವಿಚಾರಿಸಲಾಗಿ ಸದರಿ ಸ್ಪಿರಿಟನ್ನು ಚಾಲಕ ನವೀನ ಸೇರಿ ವಿಳಾಸ ತಿಳಿಯದ ಕೃಷ್ಣಪ್ಪ ಎಂಬುವವರಿಂದ ಬೈಲುಕುಪ್ಪೆಯಿಂದ ತೆಗೆದುಕೊಂಡು ಬಂದಿರುವುದಾಗಿ ತಿಳಿಸಿದ್ದು ಈ ವಿಚಾರ ವಾಹನ ಮಾಲೀಕರಾದ ಮಹೇಶ ಎಂಬುವವರಿಗೆ ಗೊತ್ತಿದ್ದು ನಾನು ಹಾಗೂ ಚಾಲಕ ನವೀನ, ಕೃಷ್ಣಪ್ಪ ಹಾಗೂ ಇತರರು ಸೇರಿ ಸುಮಾರು 3 ತಿಂಗಳಿನಿಂದ ಅಕ್ರಮವಾಗಿ ಸ್ಪಿರಿಟನ್ನು ತಂದು ಅದಕ್ಕೆ ಬಣ್ಣ ಸೇರಿಸಿ ಬ್ರಾಂಡಿ ಶಾಪ್‌ಗಳಿಗೆ ಸರಬರಾಜು ಮಾಡುತ್ತಿದ್ದುದಾಗಿ ತಿಳಿಸಿದ ಮೇರೆಗೆ ಸದರಿ ವ್ಯಕ್ತಿಯನ್ನು ದಸ್ತಗಿರಿ ಮಾಡಿ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 32, 34, 36 ರ ರೀತ್ಯಾ ಆರಕ್ಷಕ ಉಪ ನಿರೀಕ್ಷಕರು, ಶನಿವಾರಸಂತೆ ಠಾಣೆ ಇವರ ಮೊಕದ್ದಮೆ ಸಂ:7/2008 ದಿನಾಂಕ:17–1–2008ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಮುಂದಿನ ಕ್ರಮಕ್ಕಾಗಿ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಅನುಮತಿಯನ್ನು ಪಡೆದು ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ನಂತರ ವಾಹನದ ಅಧಿಕೃತ ಮಾಲೀಕರನ್ನು ಪತ್ತೆಹಚ್ಚುವ ಸಲುವಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಈ ಪ್ರಾಧಿಕಾರದ ಪತ್ರ ಸಮ ಸಂಖ್ಯೆ ದಿನಾಂಕ:9-2-2009ರಂದು ಪತ್ರ ಬರೆಯಲಾಗಿರುತ್ತದೆ. ಈ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ ಪತ್ರ ಸಂಖ್ಯೆ:ಪ್ರ.ಸ.ಅ.ಮ:ಕೆ. ಎ.20.ಎಂ-8484/2008-09, ದಿನಾಂಕ:13-2-2009ರಲ್ಲಿ ವಾಹನದ ಮಾಲೀಕರ ಹೆಸರು ವಿಳಾಸ ಮತ್ತು ವಾಹನದ ವಿವರವನ್ನೊಳಗೊಂಡ ಬಿ ಎಕ್ಸ್‌ಟ್ರಾಕ್ಟನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯರವರು ತನಿಖೆಯನ್ನು ಪ್ರಾರಂಭಿಸಿ ವಶಪಡಿಸಿಕೊಂಡ 35ಲೀಟರಿನ 8 ಪ್ಲಾಸ್ಟಿಕ್ ಕ್ಯಾನುಗಳಲ್ಲಿನ ಮದ್ಯಸಾರದಿಂದ ಪ್ರತಿ ಕ್ಯಾನಿನಿಂದ 180ml ನಂತೆ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ ಮದ್ಯಸಾರವನ್ನು ಸರ್ಕಾರದ ಅಧಿಸೂಚನೆ ಸಂ:FD.06. ಪಿಇಎಸ್/2007 ದಿನಾಂಕ:13-07-07ರಲ್ಲಿ ಆದೇಶದಂತೆ ವಶಪಡಿಸಿಕೊಂಡ ಅಬಕಾರಿ ಮಾದಕ ಪದಾರ್ಥಗಳನ್ನು ನಾಶಪಡಿಸಲು ಸೂಚಿಸಿರುವುದರಿಂದ ಸದರಿ 35ಲೀಟರಿನ 8 ಪ್ಲಾಸ್ಟಿಕ್ ಕ್ಯಾನುಗಳ ಮದ್ಯಸಾರದಿಂದ ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿಯನ್ನು ಹೊರತುಪಡಿಸಿ ಉಳಿದ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಅದೇಶ ನೀಡಬೇಕಾಗಿ ಅಬಕಾರಿ ನಿರೀಕ್ಷಕರ ಪತ್ರ ಸಂ:ಇಎಕ್ಸ್‌ಇ:ಸೋ.ಪೇಟೆ.ವಲಯ:ಮುಟ್ಟುಗೋಲು:2/08-09 ದಿನಾಂಕ:18-5-2009ರಂದು ಕೋರಿಕೊಂಡ ಮೇರೆ ದಿನಾಂಕ:29-5-2009ರಂದು ಆದೇಶ ಸಂ:ಇಎಕ್ಸ್‌ಇ:ಸಿಆರ್‌ಎಂ:18/08-09ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಲಾಗಿರುತ್ತದೆ.

ತದನಂತರ ಬಿ ಎಕ್ಸ್‌ಟ್ರಾಕ್ಟ್‌ನಲ್ಲಿದ್ದಂತೆ ಶ್ರೀ ರಹೀಂ, ತಾಯಿ ಖತೀಜ, ಒಡೆಯನಪುರ ಗ್ರಾಮ, ಗೋಪಾಲಪುರ ಅಂಚೆ, ಸೋಮವಾರಪೇಟೆ ತಾಲ್ಲೂಕು ಇವರು ಪ್ರಕರಣ ದಾಖಲಿಸುವ ಸಮಯದಲ್ಲಿ ವಾಹನದ ಮಾಲೀಕರಾಗಿದ್ದು ಇವರಿಗೆ ಈ ಕಛೇರಿ ಪತ್ರ ಸಮ ಸಂಖ್ಯೆ ದಿನಾಂಕ:10-8-09ರಂದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43 ಬಿ ರ ರೀತ್ಯಾ ಕಾರಣ ಕೇಳಿ ನೋಟೀಸು ನೀಡಿ ನೋಟೀಸು ತಲುಪಿದ ಹತ್ತು ದಿವಸದ ಒಳಗಾಗಿ ಸೂಕ್ತ ದಾಖಲಾತಿಗಳೊಂದಿಗೆ ಸಮಜಾಯಿಷಿ ನೀಡಬೇಕೆಂದು ತಪ್ಪಿದಲ್ಲಿ ಸೂಕ್ತ ಕ್ರಮ ಜರುಗಿಸಲಾಗುವುದೆಂದು ತಿಳಿಸಲಾಗಿರುತ್ತದೆ. ಸದರಿ ಕಾರಣ ಕೇಳಿ ನೋಟೀಸನ್ನು ಅಬಕಾರಿ ಉಪ ನಿರೀಕ್ಷಕರು, ಸೋಮವಾರಪೇಟೆ ವಲಯರವರು ಖುದ್ದಾಗಿ ರಹೀಂ ರವರ ಮನೆಗೆ ಭೇಟಿ ನೀಡಿ, ರಹೀಂ ರವರು ಮನೆಯಲ್ಲಿ ಇಲ್ಲದ ಕಾರಣ ಅವರ ತಾಯಿಯೊಂದಿಗೆ ಮೊಬೈಲ್ ಮುಖಾಂತರ ಮಾತನಾಡಿ ಮನೆಯಲ್ಲಿದ್ದ ಅವರ ತಂಗಿಯವರಾದ ಸಮೀನ ರವರಿಗೆ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಿ ಅವರಿಂದ ಸ್ವೀಕೃತಿಯನ್ನು ಪಡೆದು ಅಬಕಾರಿ ಉಪ ನಿರೀಕ್ಷಕರ ಪತ್ರ ಸಂ:ಸೋ.ಪೇಟೆ:ಕಾರಣ ಕೇಳಿ ನೋಟೀಸ್:2:09-10 ದಿನಾಂಕ:15-10-09ರಂದು ವರದಿಯೊಂದಿಗೆ ಸ್ವೀಕೃತಿ ಪ್ರತಿಯನ್ನು ಲಗತ್ತಿಸಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಮಾರುತಿ ಓಮ್ನಿ ಕೆಎ-20 ಎಂ-8484 ರನ್ನು ಸ್ವಾಧೀನಪಡಿಸಿಕೊಂಡು ಅಂದಾಜು ಎರಡು ವರ್ಷ ಮೇಲಾಗಿದ್ದು ಈವರೆಗೂ ವಾಹನದ ಮಾಲೀಕತ್ವವನ್ನು ಸಾಭೀತುಪಡಿಸುವಲ್ಲಿ ಮಾಲೀಕರಾಗಲಿ/ ಸಂಬಂಧಪಟ್ಟವರಾಗಲಿ ಮುಂದೆ ಬಾರದ ಕಾರಣ ಮತ್ತು ದಿನಾಂಕ:10-8-09ರಂದು ನೀಡಿರುವ ಕಾರಣ ಕೇಳಿ ನೋಟೀಸಿಗೂ ಸಹ ಯಾವುದೇ ಉತ್ತರವನ್ನು ನೀಡಲು ಪ್ರಾಧಿಕಾರಕ್ಕೆ ಹಾಜರಾಗದ ಕಾರಣ ಸದರಿ ವಾಹನವನ್ನು ಅಕ್ರಮವಾಗಿ ಮದ್ಯಸಾರವನ್ನು ಸಾಗಿಸಲು ಬಳಸಲಾಗಿತ್ತೆಂದು ಮೇಲ್ನೋಟಕ್ಕೆ ಸಾಭೀತಾಗಿರುವುದರಿಂದ ಹಾಗೂ ಸದರಿ ವಾಹನವನ್ನು ತೆರೆದ ಪ್ರದೇಶದಲ್ಲಿ ಯಾವುದೇ ಭದ್ರತೆ ಇಲ್ಲದೆ ನಿಲ್ಲಿಸಿರುವುದರಿಂದ ಇದರ ಮೌಲ್ಯವು ದಿನದಿಂದ ದಿನಕ್ಕೆ ಕಡಿಮೆಯಾಗುವ ಸಾಧ್ಯತೆಯಿರುವುದರಿಂದ ಸದರಿ ವಾಹನವನ್ನು ವಾರಸುದಾರರಿಲ್ಲದ ಸ್ವೊತ್ತೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ರವರ ವರದಿ ಪತ್ರ ಸಂ:ಸೋ.ಪೇಟೆ:ವಲಯ:ಮುಟ್ಟುಗೋಲು/ಡಿ.ಟಿ.ಸಿ.ಆರ್/ 47/08-09, ದಿನಾಂಕ:10-2-2010ರಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯಾವುದೇ ಪ್ರಕರಣವನ್ನು ದಾಖಲು ಮಾಡುವಲ್ಲಿ ಆರೋಪಿಗಳು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ವಾಹನವನ್ನು ಜಪ್ತು ಮಾಡಲಾದ ಒಂದು ತಿಂಗಳೊಳಗಾಗಿ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನುಬದ್ಧ ದಾಖಲಾತಿಗಳೊಂದಿಗೆ ನಿರೀಕ್ಷಕರ ಕಛೇರಿಗಾಗಲಿ, ಅಥವಾ ಪ್ರಾಧಿಕಾರಕ್ಕಾಗಲಿ ಅರ್ಜಿ ಸಲ್ಲಿಸದಿದ್ದಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ. ಆದುದರಿಂದ 43(ಬಿ)ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಸದರಿ ಮಾರುತಿ ಓಮ್ನಿ ಕೆಎ-20 ಎಂ-8484ರನ್ನು ವಾರಸುದಾರರಿಲ್ಲದ ಸ್ವೊತ್ತೆಂದು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ ಮತ್ತು ಅಬಕಾರಿ ನಿರೀಕ್ಷಕರ ಕೋರಿಕೆಯಂತೆ

ಸದರಿ ವಾಹನವನ್ನು ಯಾವುದೇ ಭದ್ರತೆಯಿಲ್ಲದೆ ತೆರೆದ ಪ್ರದೇಶದಲ್ಲಿ ನಿಲ್ಲಿಸಿದ್ದು ಕೊಡಗಿನ ಹವಾಮಾನದ ವೈಪರೀತ್ಯಕ್ಕೆ ಇನ್ನೂ ಹೆಚ್ಚುಸಮಯ ನಿಲ್ಲಿಸಿದಲ್ಲಿ ಸರ್ಕಾರಕ್ಕೆ ಬರುವ ಆದಾಯವು ಕಡಿಮೆಯಾಗುವ ಸಾಧ್ಯತೆಯಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಪ್ರಾಧಿಕಾರದಲ್ಲಿ ತೀರ್ಮಾನಿಸಲಾಗಿ ಈ ಕೆಳಕಂಡ ಆದೇಶ.

**ಆದೇಶ ಸಂ:ಇಎಕ್ಸ್ಇ:ಡಿಟಿಸಿಆರ್:47/08–09 ದಿನಾಂಕ:24ನೇ ಫೆಬ್ರವರಿ, 2010**

**ಸಿ.ಎಲ್.ಜಯರಾಮ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ** ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ 43(ಎ)ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, 43(ಬಿ)ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಆರಕ್ಷಕ ಉಪ ನಿರೀಕ್ಷಕರು, ಶನಿವಾರಸಂತೆ ಠಾಣೆ ಇವರ ಮೊಕದ್ದಮೆ ಸಂ:7/08 ದಿನಾಂಕ:17–01–08ರಲ್ಲಿ ಜಪ್ತು ಪಡಿಸಿರುವ ವಾಹನ ಮಾರುತಿ ಓಮ್ನಿ ಕೆಎ–20 ಎಂ–8484ರನ್ನು ವಾರಸುದಾರರಿಲ್ಲದ ಸ್ವತ್ತೆಂದು ಪರಿಗಣಿಸಿ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ 43(ಸಿ)ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಸದರಿ ಮುಟ್ಟುಗೋಲಾದ ವಾಹನವನ್ನು ಈ ಆದೇಶದ 30 ದಿನಗಳ ನಂತರ ಕರ್ನಾಟಕ ಅಬಕಾರಿ(ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ) ನಿಯಮ 1967ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸುವುದಾಗಿ ಇಂದು ಅಂದರೆ ದಿನಾಂಕ:24–02–2010ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್.324

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಉಪ ಆಯುಕ್ತರು, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಇಎಕ್ಸ್ಇ:ಡಿಟಿಸಿಆರ್ಎಂ:179:2003–04, ದಿನಾಂಕ:23ನೇ ಮಾರ್ಚ್, 2010**

**ಉಪಸ್ಥಿತರು:** ಸಿ.ಎಲ್.ಜಯರಾಮ್,
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಉಪ ಆಯುಕ್ತರು,
ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಅಬಕಾರಿ ಉಪ ನಿರೀಕ್ಷಕರು,<br>ಸಂಚಾರ ದಳ, ವಿರಾಜಪೇಟೆ | | ಐಚಂಡ.ಪಿ.ಸುನಿಲ್,<br>ತಂದೆ ಪೊನ್ನಪ್ಪ,<br>ದೇವಣಗೇರಿ ಗ್ರಾಮ<br>ವಿರಾಜಪೇಟೆ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:** ದಿನಾಂಕ:17–2–2004ರಂದು ಅಬಕಾರಿ ಸಂಚಾರ ದಳ, ಅಬಕಾರಿ ಉಪ ನಿರೀಕ್ಷಕರು ಸಿಬ್ಬಂದಿಯೊಂದಿಗೆ ಸಾಯಂಕಾಲ 6.15ಗಂಟೆಗೆ ಕರ್ತವ್ಯದ ಮೇಲೆ ದೇವಣಗೇರಿ ಕಡೆಗೆ ನಡೆದುಕೊಂಡು ಹೋಗುತ್ತಿರುವಾಗ ಎದುರಾಗಿ ದೂರದಿಂದ ಹೀರೋ ಹೋಂಡ ಸ್ಪ್ಲೆಂಡರ್ ಬೈಕ್‌ನಲ್ಲಿ ಬರುತ್ತಿದ್ದ ವ್ಯಕ್ತಿಯು ಅಬಕಾರಿ ಅಧಿಕಾರಿಗಳನ್ನು ಕಂಡಕೂಡಲೇ ಬೈಕನ್ನು ಮತ್ತು ಬೈಕಿನಲ್ಲಿದ್ದ ಪ್ಲಾಸ್ಟಿಕ್ ಚೀಲವನ್ನು ಬಿಟ್ಟು ಪಕ್ಕದ ತೋಟದೊಳಗೆ ಓಡಿಹೋದನು. ಇವನನ್ನು ಓಡಿಸಿ ಹಿಂಬಾಲಿಸಿಕೊಂಡು ಹೋಗಲಾಗಿ ವ್ಯಕ್ತಿಯನ್ನು ಹಿಡಿಯಲು ಆಗಲಿಲ್ಲ. ನಂತರ ಅವನು ಬಿಟ್ಟುಹೋದ ಚೀಲವನ್ನು ಬಿಚ್ಚಿ ಪರಿಶೀಲಿಸಲಾಗಿ ಅದರಲ್ಲಿ 150x100 ಮಿಲಿಯ ಸಾರಾಯಿ ಪ್ಯಾಕೆಟ್ ಇರುವುದು ಕಂಡುಬಂತು. ಇದರಿಂದ ರಾಸಾಯನಿಕ ಪರೀಕ್ಷೆಗೆಂದು 1x100 ಮಿಲಿಯ ಸಾರಾಯಿ ಪ್ಯಾಕೆಟನ್ನು ಬಟ್ಟೆ ಸುತ್ತಿ ದಾರದಿಂದ ಕಟ್ಟಿ ಇಲಾಖೆ ಮೊಹರು ಮಾಡಿರುತ್ತಾರೆ. ಓಡಿಹೋದ ಆರೋಪಿಯ ಬಗ್ಗೆ ಸ್ಥಳದಲ್ಲಿದ್ದವರನ್ನು ವಿಚಾರಿಸಿದಾಗ ಓಡಿ ಹೋದವನು ಐಚಂಡ.ಪಿ.ಸುನಿಲ್, ತಂದೆ ಪೊನ್ನಪ್ಪ, ಪ್ರಾಯ ಅಂದಾಜು 25 ವರ್ಷ ಎಂಬುದಾಗಿ ಪಂಚಾಯತುದಾರರು ತಿಳಿಸಿರುವುದರಿಂದ, ಅದರಂತೆ ಸಾರಾಯಿ ಪ್ಯಾಕೆಟ್ ಮತ್ತು ಹೀರೋ ಹೋಂಡ ಸ್ಪ್ಲೆಂಡರ್ ಬೈಕ್ ಸಂ.ಕೆಎ–12–ಹೆಚ್–1219ರನ್ನು ಒಳಪಡಿಸಿಕೊಂಡು ಮೊಕದ್ದಮೆ ಸಂ.13/2003–04, ದಿನಾಂಕ:17/2/04ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಮುಂದಿನ ಕ್ರಮಕ್ಕೋಸ್ಕರ ಅಬಕಾರಿ ಉಪ ನಿರೀಕ್ಷಕರು, ವಿರಾಜಪೇಟೆ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

**ಜಪ್ತುಪಡಿಸಿಕೊಂಡ ಸ್ವೊತ್ತುಗಳು**

1. ಹೀರೋ ಹೋಂಡ ಸ್ಪ್ಲೆಂಡರ್ ಬೈಕ್ ಸಂ.ಕೆಎ-12-ಹೆಚ್-1219, ಚಾಸಿಸ್ ಸಂ.03D20 F.52364
2. ಸಾರಾಯಿ ಪ್ಯಾಕೆಟ್ 150x100ಮಿಲಿ

ದಿನಾಂಕ:28-2-04ರಂದು ವಾಹನದ ಮಾಲೀಕರಾದ ಶ್ರೀ ಸಿ.ಎಸ್.ಉದಯ, ಬಿನ್ ಸುಬ್ಬಯ್ಯ, ಚೆಂಬೆಬೆಳ್ಳೂರು ಗ್ರಾಮ ಮತ್ತು ಅಂಚೆ, ವಿರಾಜಪೇಟೆ ತಾಲ್ಲೂಕು ರವರ ಅವರ ಪರ ವಕೀಲರಿಂದ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಹೀರೋ ಹೋಂಡ ಸ್ಪ್ಲೆಂಡರ್ ಬೈಕ್‌ಗೆ ಸಂಬಂಧಪಟ್ಟ ಅಧಿಕೃತ ಮಾಲೀಕರನ್ನು ಪತ್ತೆಗಾಗಿ ಸದರಿ ವಾಹನದ ಬಿ ಎಕ್ಸ್‌ಟ್ರಾಕ್ಟ್ ಪಡೆಯಲು ಕೊಡಗು ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಗೆ ಇದೇ ಸಮ ಸಂಖ್ಯೆ:179/2003-04, ದಿನಾಂಕ:6-4-2004ರಂದು ಪತ್ರ ಮುಖೇನ ಕೋರಲಾಗಿದ್ದು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ ಪತ್ರ ಸಂ:ಪ್ರಾ.ಸಾ.ಅ. ಮ.ಕೆಎ.12.ಹೆಚ್.1219/04-05, ದಿನಾಂಕ:15-4-04ರಂದು ವಾಹನದ ಬಿ ಎಕ್ಸ್‌ಟ್ರಾಕ್ಟ್‌ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಬಿ ಎಕ್ಸ್‌ಟ್ರಾಕ್ಟ್‌ನಲ್ಲಿನ ವರದಿಯ ಪ್ರಕಾರ ವಾಹನದ ನೋಂದಣಿ ಮಾಲೀಕರಾದ ಶ್ರೀ ಸಿ.ಎಸ್.ಉದಯ, ಬಿನ್ ಸುಬ್ಬಯ್ಯ, ಚೆಂಬೆಬೆಳ್ಳೂರು ಗ್ರಾಮ ಮತ್ತು ಅಂಚೆ, ವಿರಾಜಪೇಟೆ ತಾಲ್ಲೂಕು ಇವರಿಗೆ ಈ ಪ್ರಾಧಿಕಾರದಿಂದ ಅಬಕಾರಿ ಕಾಯ್ದೆ 1965ರ ಕಲಂ 43ಬಿ ರಡಿಯಲ್ಲಿ ಕಾರಣ ಕೇಳಿ ನೋಟೀಸನ್ನು ದಿನಾಂಕ:21-6-04ರಂದು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸು ವಾಹನದ ಮಾಲೀಕರಾದ ಶ್ರೀ ಸಿ.ಎಸ್.ಉದಯ ರವರಿಗೆ ಸ್ವೀಕೃತಿಯಾಗಿದ್ದು ದಿನಾಂಕ:30-6-04ರಂದು ಅವರ ಪರ ವಕೀಲರ ಮೂಲಕ ಕಾರಣ ಕೇಳಿ ನೋಟೀಸಿಗೆ ಉತ್ತರವನ್ನು ನೀಡಿ ವಾಹನವನ್ನು ಮಧ್ಯಂತರ ಬಿಡುಗಡೆಗೊಳಿಸಿ ಕೊಡಬೇಕಾಗಿ ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಜಪ್ತುಪಡಿಸಿಕೊಳ್ಳಲಾದ ವಾಹನ ಸಂ. ಕೆಎ.12.ಹೆಚ್.1219ಕ್ಕೆ ಇಂದಿನ ಮಾರ್ಕೆಟ್ ಮೌಲ್ಯವನ್ನು ನಿಗಧಿಪಡಿಸಲು ಇದೇ ಪತ್ರ ಸಮ ಸಂಖ್ಯೆ ದಿನಾಂಕ:19-6-04ರಲ್ಲಿ ಇಂದಿನ ಮಾರ್ಕೆಟ್ ಮೌಲ್ಯವನ್ನು ನಿಗಧಿಪಡಿಸಲು ಕೋರಿಕೊಂಡ ಹಿನ್ನಲೆಯಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯ ಮೋಟಾರು ತನಿಖಾಧಿಕಾರಿ ವಾಹನವನ್ನು ಪರಿಶೀಲಿಸಿ ರೂ.30,200/-ಮೌಲ್ಯವನ್ನು ನಿಗಧಿಪಡಿಸಿ ದಿನಾಂಕ:24-6-04ರಂದು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ತದನಂತರ ಪ್ರಾಧಿಕಾರದಲ್ಲಿ ತೀರ್ಮಾನಿಸಲಾಗಿ ವಾಹನವನ್ನು ಚಾಲನೆಯ ಸ್ಥಿತಿಯಿಲ್ಲದೆ ನಿಲ್ಲಿಸಿದಲ್ಲಿ ವಾಹನವು ಕೊಡಗಿನ ಹವಾಮಾನ ವೈಪರೀತ್ಯಕ್ಕೆ ಹಾಳಾಗಿ ಮೌಲ್ಯವನ್ನು ಕಳೆದುಕೊಳ್ಳುವ ಸ್ಥಿತಿ ಇರುವುದರಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನಿಗಧಿಪಡಿಸಿದ ಮಾರ್ಕೆಟ್ ಮೌಲ್ಯ ರೂ.30,200/-(ಮೂವತ್ತು ಸಾವಿರದ ಎರಡುನೂರು) ಮೊತ್ತಕ್ಕೆ ಸಮನಾದ ಬ್ಯಾಂಕ್ ಗ್ಯಾರೆಂಟಿಯನ್ನು ಪಡೆದುಕೊಂಡು ವಾಹನದ ಮಾಲೀಕರಾದ ಶ್ರೀ ಸಿ.ಎಸ್.ಉದಯ, ಬಿನ್ ಸುಬ್ಬಯ್ಯ, ಚೆಂಬೆಬೆಳ್ಳೂರು ಗ್ರಾಮ ಮತ್ತು ಅಂಚೆ, ವಿರಾಜಪೇಟೆ ತಾಲ್ಲೂಕು ಇವರ ವಶಕ್ಕೆ ನೀಡಲು ಆದೇಶ ಸಂ:ಇಎಕ್ಸ್‌ಇ: ಡಿಟಿಸಿಆರ್‌ಎ೦:179: 2003-04, ದಿನಾಂಕ:16-7-04ರಲ್ಲಿ ತಾತ್ಕಾಲಿಕ ನೆಲೆಯಲ್ಲಿ ಮಧ್ಯಂತರ ಬಿಡುಗಡೆಗೊಳಿಸಲಾಗಿರುತ್ತದೆ. ದಿನಾಂಕ:19-7-04ರಂದು ಸೂಕ್ತ ಸ್ವೀಕೃತಿಯನ್ನು ನೀಡಿ ವಾಹನವನ್ನು ತಮ್ಮ ವಶಕ್ಕೆ ಪಡೆದುಕೊಂಡಿರುತ್ತಾರೆ.

ಪ್ರಕರಣದಲ್ಲಿ ಜಪ್ತಾದ ಸಾರಾಯಿ ಪ್ಯಾಕೇಟುಗಳನ್ನು ಪ್ರಕರಣದ ತನಿಖಾಧಿಕಾರಿಗಳು ರಾಸಾಯನಿಕ ಪರೀಕ್ಷೆಗೆ ದಿನಾಂಕ:27-11-04ರಂದು ಮಂಗಳೂರು ರಾಸಾಯನಿಕ ಕೇಂದ್ರ, ಮಂಗಳೂರು ಇಲ್ಲಿ ಒಳಪಡಿಸಿ, ವಿಶ್ಲೇಷಣಾ ವರದಿಯ ಪ್ರತಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು ಸದರಿ ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯಲ್ಲಿ ವಶಪಡಿಸಿಕೊಂಡ ಸಾರಾಯಿಯಲ್ಲಿ ಮದ್ಯಸಾರದ ಅಂಶ 22.0% ಇರುವುದಾಗಿ ದೃಢೀಕರಣ ನೀಡಿರುತ್ತಾರೆ. ಸದರಿ ರಾಸಾಯನಿಕ ಪರೀಕ್ಷೆ ಫಲಿತಾಂಶದ ವರದಿಯಲ್ಲಿ ಸಾರಾಯಿ ಎಂದು ದೃಢಪಟ್ಟಿರುವುದರಿಂದ ಆದೇಶ ಸಂ:ಸಿಆರ್‌ಎಂ:20/07-08, ದಿನಾಂಕ:21-8-07ರಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶಿಸಲಾಗಿರುತ್ತದೆ.

ಮೇಲಿನ ವಿದ್ಯಾಮಾನಗಳನ್ನು ಅವಲೋಕಿಸಿ ಸರ್ಕಾರದ ಪರ ಸಾಕ್ಷಿದಾರರನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಗಳ ಹೇಳಿಕೆಯನ್ನು ಹಾಗೂ ಪ್ರತಿರಕ್ಷಾ ಸಾಕ್ಷಿ ಹೇಳಿಕೆಯನ್ನು ಪಡೆಯಲಾಗಿರುತ್ತದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನಾ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1. **ಮೊದಲನೇ ವಿವಾದಾಂಶ:** ದಿನಾಂಕ:17-2-04ರಂದು ಹೀರೋ ಹೋಂಡ ಸ್ಪ್ಲೆಂಡರ್ ಬೈಕ್ ಸಂ. ಕೆಎ.12.ಹೆಚ್.1219ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮ ಸಾರಾಯಿ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

2. **ಎರಡನೇ ವಿವಾದಾಂಶ:**ಸದರಿ ವಾಹನದ ಮಾಲೀಕರು ವಾಹನದಲ್ಲಿ ತನಗೆ ತಿಳಿಯದೆ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತುಪಡಿಸಿದ್ದಾರೆಯೇ? ಅಥವಾ ಇಲ್ಲವೇ?
3. **ಮೂರನೇ ವಿವಾದಾಂಶ:**ಜಪ್ತುಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ?ಅಥವಾ ಇಲ್ಲವೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸುತ್ತೇನೆ.

ಒಂದನೇ ವಿವಾದಾಂಶಕ್ಕೆ ಉತ್ತರ ಹೌದು ಎಂದಾಗುತ್ತದೆ. ಎರಡನೇ ಅಂಶಕ್ಕೆ ಉತ್ತರ ಇಲ್ಲಾ ಎಂದಾಗುತ್ತದೆ. ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

ಈ ಪ್ರಕರಣದಲ್ಲಿ ಲಭ್ಯವಾಗಿರುವ ಸಾಕ್ಷ್ಯಾಧಾರಗಳನ್ನು ಒಂದೊಂದಾಗಿ ಈ ಕೆಳಗಿನಂತೆ ನಾನು ಚರ್ಚಿಸಿದ್ದೇನೆ.

ಪ್ರಾ.ಸಾ. 1: ಪ್ರಾಸಿಕ್ಯೂಷನ್ ಪರ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾದ ಶ್ರೀ ಚಂದ್ರಶೇಖರ್, ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ಇವರು ದಿನಾಂಕ:2–12–08ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮುಖ್ಯ ವಿಚಾರಣೆಗೆ ಉತ್ತರ ನೀಡುತ್ತಾ ನಾನು ಅಬಕಾರಿ ಉಪ ನಿರೀಕ್ಷಕನಾಗಿ ದಿನಾಂಕ:2–11–03ರಿಂದ 4–8–07ರ ವರೆಗೂ ವಿರಾಜಪೇಟೆ ಅಬಕಾರಿ ಸಂಚಾರಿ ದಳದಲ್ಲಿ, ಅಬಕಾರಿ ಉಪ ನಿರೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದು ದಿನಾಂಕ:17–2–04ರಂದು ವಿರಾಜಪೇಟೆ ತಾಲ್ಲೂಕು ದೇವಣಗೇರಿ ಗ್ರಾಮದಲ್ಲಿ ಅಕ್ರಮವಾಗಿ ಸಾರಾಯಿ ಪ್ಯಾಕೇಟುಗಳನ್ನು ಸಾಗಾಟ ಮಾಡುತ್ತಿದ್ದಾರೆಂಬ ವರ್ತಮಾನದ ಮೇರೆಗೆ ನಾನು ನನ್ನ ಸಿಬ್ಬಂದಿಯವರೊಂದಿಗೆ ಸಂಜೆ 6.15ಗಂಟೆ ಸಮಯದಲ್ಲಿ ವಿರಾಜಪೇಟೆಯಿಂದ ದೇವಣಗೇರಿ ಕಡೆಗೆ ಹೋಗುವ ರಸ್ತೆಯಲ್ಲಿ ಅಬಕಾರಿ ಗಸ್ತು ರಸ್ತೆಕಾವಲು ಮಾಡುತ್ತಿದ್ದಾಗ ನಮ್ಮ ಎದುರಾಗಿ ಒಂದು ಹೀರೋ ಹೋಂಡ ಸ್ಪ್ಲೆಂಡರ್ ಬೈಕ್ ಬರುತ್ತಿದ್ದು ಆಸಾಮಿ ನಮ್ಮಗಳನ್ನು ಕಂಡ ಕೂಡಲೇ ಬೈಕನ್ನು ಹಾಗೂ ಬೈಕಿನಲ್ಲಿದ್ದ ಪ್ಲಾಸ್ಟಿಕ್ ಮೂಟೆಯನ್ನು ಬಿಟ್ಟು ಪಕ್ಕದ ಕಾಫಿತೋಟದಲ್ಲಿ ಓಡಿ ಹೋದನು. ನಾವುಗಳು ಆತನನ್ನು ಹಿಂಬಾಲಿಸಿಕೊಂಡು ಹೋದೆವು ಆಸಾಮಿ ಸಿಗಲಿಲ್ಲ. ನಂತರ ಹಾಜರಿದ್ದ ಪಂಚರೊಂದಿಗೆ ಬೈಕನ್ನು ಹಾಗೂ ಪ್ಲಾಸ್ಟಿಕ್ ಮೂಟೆಯನ್ನು ಬಿಚ್ಚಿ ನೋಡಲಾಗಿ ಚೀಲದಲ್ಲಿ ಸೀಲಾದ ಸಾರಾಯಿ ಪ್ಯಾಕೆಟ್‌ಗಳಿದ್ದು, ಲೆಕ್ಕ ಮಾಡಲಾಗಿ 100 ಎಂ.ಎಲ್.ನ 150 ಸಾರಾಯಿ ಪ್ಯಾಕೇಟುಗಳಿದ್ದು, ರಾಸಾಯನಿಕ ಪರೀಕ್ಷೆಗಾಗಿ 100 ಎಂ.ಎಲ್.ನ ಒಂದು ಸಾರಾಯಿ ಪ್ಯಾಕೇಟು ಮಾದರಿ ತೆಗೆದು ಪ್ಯಾಕೆಟ್‌ಗೆ ಬಟ್ಟೆ ಸುತ್ತಿ ದಾರ ಕಟ್ಟಿ ಹಾಗೂ ಚೀಲಕ್ಕೆ ದಾರ ಕಟ್ಟಿ ಇಲಾಖೆ ಸೀಲ್‌ನಿಂದ ಸೀಲುಮಾಡಲಾಯಿತು. ಹಾಗೂ ಬೈಕ್ ನಂ. ಕೆಎ.12.ಹೆಚ್.1219 ಸ್ಥಳದಲ್ಲೇ ಮಹಜರು ಮುದ್ರೆಯನ್ನು ತಯಾರಿಸಲಾಯಿತು. ಓಡಿಹೋದ ಆಸಾಮಿಯ ವಿಳಾಸವನ್ನು ಪಂಚರಲ್ಲಿ ಕೇಳಲಾಗಿ ಐಚಂಡ ಸುನಿಲ್, ತಂದೆ ಪೊನ್ನಪ್ಪ, ಪ್ರಾಯ 25 ವರ್ಷ, ದೇವಣಗೇರಿ ಗ್ರಾಮ, ವಿರಾಜಪೇಟೆ ತಾಲ್ಲೂಕು ಎಂದು ಹೇಳಿದರು. ನಂತರ ಮಹಜರು ಚೀಟಿಗಳಿಗೆ ಹಾಗೂ ಸಾರಾಯಿ ಪ್ಯಾಕೆಟ್‌ಗಳಿಗೆ ಚೀಟಿಗಳನ್ನು ಅಂಟಿಸಲಾಯಿತು. ಸ್ಥಳದಲ್ಲಿ ಸ್ಥಳ ಮಹಜರು ನಡೆಸಲಾಯಿತು. ಅದಕ್ಕೆ ಪಂಚರ ಸಹಿ ಪಡೆಯಲಾಯಿತು. ಬೈಕ್ ಹಾಗೂ ದಾಸ್ತಾನನ್ನು ಕಛೇರಿಗೆ ತರಲಾಯಿತು. ಆಸಾಮಿಯ ವಿರುದ್ಧ ಮೊಕದ್ದಮೆ ದಾಖಲು ಮಾಡಲಾಯಿತು. ಮಹಜರು ಓದಿಸಿ ಕೇಳಲಾಗಿ ಸರಿ ಇದ್ದು ಒಪ್ಪಿ ಸಹಿ ಮಾಡಲಾಯಿತು. ಪ್ರಥಮ ವರ್ತಮಾನ ವರದಿಯನ್ನು ವಿರಾಜಪೇಟೆ ನ್ಯಾಯಾಲಯಕ್ಕೆ ಸಲ್ಲಿಸಲಾಯಿತು. ಹಾಗೂ ಅಬಕಾರಿ ಉಪ ಆಯುಕ್ತರು, ಮಡಿಕೇರಿ ಇವರಿಗೂ ಸಲ್ಲಿಸಲಾಯಿತು. ರಾಸಾಯನಿಕ ಪರೀಕ್ಷೆಗೆ ಒಂದು ಸೀಲಾದ ಕವರ್ ಹಾಗೂ ಮಾದರಿ ಸಾರಾಯಿ ಪ್ಯಾಕೇಟ್‌ನ್ನು ದಿನಾಂಕ:27–11–04ರಂದು ಮಂಗಳೂರಿನ ರಾಸಾಯನಿಕ ಪರೀಕ್ಷಾ ಕೇಂದ್ರಕ್ಕೆ ಪರೀಕ್ಷೆಗಾಗಿ ಶ್ರೀ ಮೋಹನ್, ಅಬಕಾರಿ ರಕ್ಷಕರು ಇವರೊಂದಿಗೆ ಕಳುಹಿಸಿಕೊಡಲಾಯಿತು. ದಿನಾಂಕ:1–12–04 ರಂದು ಅಂಚೆ ಮೂಲಕ ರಾಸಾಯನಿಕ ವರದಿ ಬಂದಿರುತ್ತದೆ.

ಪ್ರಕರಣಕ್ಕೆ ಸಂಬಂಧಿಸಿ ತಯಾರಿಸಿದ ಸ್ಥಳ ಮಹಜರು ನ್ಯಾಯಾಲಯದಲ್ಲಿ ನಾನು ನೋಡಿ ಗುರುತಿಸಿರುತ್ತೇನೆ, ಇದನ್ನು ನಿಶಾನೆ ಪಿ.1 ಎಂದು ಗುರುತಿಸಲಾಗಿ ಸದರಿ ಮಹಜರಿನಲ್ಲಿ ನಾನು ಸಹಿ ಮಾಡಿರುವುದನ್ನು ನಿಶಾನೆ ಪಿ–1 ಎ ಎಂಬುದಾಗಿ ಗುರುತಿಸಲಾಗಿದೆ. ನಾನು ತಯಾರಿಸಿ ನ್ಯಾಯಾಲಯಕ್ಕೆ ಒಪ್ಪಿಸಿರುವ ಪ್ರ.ಮಾ ವರದಿ ಸಂಖ್ಯೆ 13ರ ಪ್ರತಿಯನ್ನು ನ್ಯಾಯಾಲಯದಲ್ಲಿ ನಾನು ನೋಡಿ ಗುರುತಿಸಿದ್ದು ನಿಶಾನೆ ಪಿ–2 ಹಾಗೂ ಸಹಿಯನ್ನು ನಿಶಾನೆ ಪಿ–2ಎ ಎಂದು ಗುರುತಿಸಲಾಗಿದೆ ಹಾಗೂ ನ್ಯಾಯಾಲಯಕ್ಕೆ ಒಪ್ಪಿಸಲಾಗಿರುವ ಸ್ವತ್ತಿನ ಪಟ್ಟಿ ಪ್ರತಿಯನ್ನು ನಾನು ನೋಡಿ ಗುರುತಿಸಿದ್ದು ಇದನ್ನು ನಿಶಾನೆ ಪಿ–3 ಹಾಗೂ ನನ್ನ ಸಹಿ ನಿಶಾನೆ ಪಿ–3–ಎ ಎಂದು ಗುರುತಿಸಲಾಗಿದೆ.

ವಶಪಡಿಸಿಕೊಂಡ ಸ್ವತ್ತುಗಳ ವರದಿ ಪ್ರತಿಯನ್ನು ಅಧಿಕೃತ ಅಧಿಕಾರಿಗಳ ನ್ಯಾಯಾಲಯಕ್ಕೆ ಒಪ್ಪಿಸಿರುವ ಪ್ರತಿಯನ್ನು ನಿಶಾನೆ–ಪಿ–4 ಹಾಗೂ ನನ್ನ ಸಹಿ 4–ಪಿ–ಎ ಎಂಬುದಾಗಿ ಗುರುತಿಸಲಾಗಿದೆ.

ಹಾಗೂ ಪ್ರಕರಣವನ್ನು ತನಿಖೆಯ ಬಗ್ಗೆ ತಮ್ಮ ವಶದಲ್ಲಿ ಇಟ್ಟುಕೊಳ್ಳಲು ಅನುಮತಿ ಕೋರಿ ಅಧಿಕೃತ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ರವರಿಗೆ ಸಲ್ಲಿಸಿದ 457ರ ಪ್ರತಿಯನ್ನು ನ್ಯಾಯಾಲಯದಲ್ಲಿ ಗುರುತಿಸಿದ್ದು ಇದನ್ನು ನಿಶಾನೆ–(ಪಿ–5) ಎಂದು ಗುರುತಿಸಲಾಗಿದೆ.

**ಪಾಟಿ ಸವಾಲು:** ಅಭಿಯೋಗದ ಪರ ಸಾಕ್ಷಿದಾರರನ್ನು ರಕ್ಷಣಾ ಪರ ವಕೀಲರಾದ ಶ್ರೀ ಎನ್.ಜಿ.ಐಯಪ್ಪ ಇವರು ಪಾಟಿ ಸವಾಲು ನಡೆಸಲಾಗಿ ಸಾಕ್ಷಿದಾರರು ಪಾಟಿ ಸವಾಲಿಗೆ ಉತ್ತರಿಸುತ್ತಾ:–ನಾನು ನನ್ನ ಮುಖ್ಯ ವಿಚಾರಣೆಯಲ್ಲಿ ಹೇಳಿದ ಅಂಶಗಳನ್ನು ದಾಖಲೆಗಳಿಂದ ಒಂದು ಹಾಳೆಯಲ್ಲಿ ಬರೆದುಕೊಂಡಿದ್ದು ನಂತರ ಆ ಹಾಳೆಯಿಂದ ನೋಡಿ ಹೇಳಿದ್ದಾಗಿರುತ್ತದೆ. ವಿರಾಜಪೇಟೆಯಿಂದ ದೇವಣಗೇರಿಗೆ 9 ಕಿ.ಮೀ ಇದೆ ಎಂದರೆ ಸರಿ, ವಿರಾಜಪೇಟೆಯಿಂದ ದೇವಣಗೇರಿ ಮಧ್ಯದಲ್ಲೆ ಕಕ್ಕ್ಲೂರು ಕೋಟೆ ಕೊಪ್ಪ ಹಾಗೂ ಚೆಂಬೆಬೆಳ್ಳೂರು ಸ್ಥಳಗಳು ಇರುತ್ತವೆ ಎಂದರೆ ಸರಿ, ನಿಶಾನೆ ಪಿ–1 ಮಹಜರಿನಲ್ಲಿ ಯಾವ ಊರಿನಲ್ಲಿ ಬರೆದಿರುವುದೆಂದು ನಮೂದಿಸಿರುವುದಿಲ್ಲ. ಕಾರ್ಯದ ಒತ್ತಡದಿಂದ ಮಹಜರು ಬರೆದ ಸ್ಥಳವನ್ನು ತೋರಿಸಲಾಗಿಲ್ಲ. ನಿಶಾನೆ–ಪಿ–1 ಮಹಜರನ್ನು ಯಾವ ಊರಿನಲ್ಲಿ ಬರೆದಿದ್ದು ಎಂದು ಹೇಳಲಿಕ್ಕೆ ಆಗುವುದಿಲ್ಲ. ವಿರಾಜಪೇಟೆ ದೇವಣಗೇರಿ ರಸ್ತೆ ಎಂಬುದಾಗಿ ನಮೂದಿಸಿರುತ್ತೇನೆ. ಅದೇ ರೀತಿ ನಿಶಾನೆ–ಪಿ–1 ಮಹಜರನ್ನು ವಿರಾಜಪೇಟೆ ದೇವಣಗೇರಿ ರಸ್ತೆಯ ಎಷ್ಟನೇ ಕಿ.ಮೀ. ನಿಂದ ಎಷ್ಟು ದೂರ ಎಂದು ನನಗೆ ನೆನಪಿರುವುದಿಲ್ಲ. ಆ ದಿನ ರಸ್ತೆ ಗಸ್ತು ಮಾಡಿಕೊಂಡು, ನಾಲ್ಕೈದು ಸಿಬ್ಬಂದಿಯವರಿದ್ದು ಶ್ರೀ ಹೆಚ್.ಸಿ.ಚಂದ್ರ, ಅಬಕಾರಿ ರಕ್ಷಕರು, ವಿರಾಜಪೇಟೆ ಒಬ್ಬರ ಕೈಯಲ್ಲಿ ಮಹಜರಿಗೆ ಸಹಿ ಮಾಡಿಸಿರುತ್ತೇನೆ. ಸದರಿ ದಿವಸದಂದು ನನ್ನೊಂದಿಗೆ ನಾಲ್ಕು ಜನ ಸಿಬ್ಬಂದಿಗಳಿದ್ದರು, ನಿಶಾನೆ ಪಿ–1 ರಿಂದ 5ರಲ್ಲಿ ಹೆಚ್.ಸಿ.ಚಂದ್ರ ಇವರ ಹೆಸರನ್ನು ಹೊರತು ಪಡಿಸಿದರೆ ಬೇರೆ ಯಾವುದೇ ಸಿಬ್ಬಂದಿಯ ಹೆಸರನ್ನು ನಮೂದಿಸಿರುವುದಿಲ್ಲ. ಆ ದಿವಸ ನಾವು ವಿರಾಜಪೇಟೆಯಿಂದ ಬೇರೆ ಸ್ಥಳಕ್ಕೆ ಗಸ್ತು ನಡೆಸಲು ಹೋಗಿದ್ದು ಅಲ್ಲಿಂದ ದೇವಣಗೇರಿ ಎಂಬ ಸ್ಥಳಕ್ಕೆ ಬಂದಿರುತ್ತೇನೆ. ಆ ದಿವಸ ವಿರಾಜಪೇಟೆಯಿಂದ ನಾವು ದೇವಣಗೇರಿಗೆ ನೇರವಾಗಿ ಹೋಗಿರುವುದಿಲ್ಲ. ಆ ದಿವಸ ನಾವು ವಿರಾಜಪೇಟೆಯಿಂದ ನೇರವಾಗಿ ಬಂದಿರುತ್ತೇನೆಂದರೆ ಸರಿ, ಸದರಿ ದಿನದಂದು ನಾನು ಗಸ್ತು ಮಾಡುತ್ತಿದ್ದಾಗ ಕೆ.ಎ.12–ಹೆಚ್–1219ರ ಸ್ಪ್ಲೆಂಡರ್ ಬೈಕನ್ನು 10 ಅಡಿ ದೂರದಲ್ಲಿ ನೋಡಿರುತ್ತೇನೆ. ಆ ದಿನ ಐಚಂಡ ಸುನಿಲ್ ಎಂಬುವವನು ಬೈಕನ್ನು ನಿಲ್ಲಿಸಿ ತೋಟದೊಳಗೆ ಓಡಿ ಹೋದನು ಎಂದರೆ ಸರಿ. ಸದರಿ ಬೈಕಿನಲ್ಲಿ ಪ್ಲಾಸ್ಟಿಕ್ ಚೀಲವು ಬೈಕಿನ ಹಿಂಭಾಗದಲ್ಲಿತ್ತು. ಆ ಪ್ಲಾಸ್ಟಿಕ್ ಚೀಲದ ಬಣ್ಣ ಬಿಳಿ. ಆ ಚೀಲ ಗೊಬ್ಬರದ ಚೀಲವಾಗಿತ್ತು, ಅದರ ಮೇಲೆ ಬರವಣಿಗೆ ಇರುವುದಿಲ್ಲ.

ಒಬ್ಬ ವ್ಯಕ್ತಿ ಚಲಿಸುತ್ತಿದ್ದ ಬೈಕಿನಿಂದ ಇಳಿಯಬೇಕಾದರೆ ಆ ವಾಹನವನ್ನು ನಿಲ್ಲಿಸಬೇಕು ಎಂದರೆ ಸರಿ. ಚಲಿಸುತ್ತಿರುವ ಬೈಕನ್ನು ನಿಲ್ಲಿಸಿ ಅದರಿಂದ ಕೆಳಗಿಳಿಯಲು ಒಬ್ಬ ವ್ಯಕ್ತಿಗೆ ಕನಿಷ್ಠ ಒಂದು ನಿಮಿಷ ಸಮಯಾವಕಾಶ ಬೇಕು ಎಂದರೆ ಸರಿ. ತೋಟಗಳಿಗೆ ತಂತಿ ಬೇಲಿ ಇರುತ್ತದೆ ಎಂದರೆ ಸರಿ. ಆದರೆ ಆ ಜಾಗದಲ್ಲಿ ತಂತಿ ತುಂಡಾಗಿತ್ತು. ಸದರಿ ದಿನಾಂಕದಂದು ಆರೋಪಿ ಸುನಿಲ್‌ನನ್ನು ತೋಟದೊಳಗೆ ಎಷ್ಟು ದೂರ ಹಿಂಬಾಲಿಸಿಕೊಂಡು ಹೋಗಿರುವುದೆಂದು ನೆನಪಿರುವುದಿಲ್ಲ. ಸದರಿ ದಿವಸದಂದು ಅಂದಾಜು ಅರ್ಧಗಂಟೆಯ ಹೊತ್ತು ಆರೋಪಿ ಸುನಿಲ್‌ರನ್ನು ಹಿಂಬಾಲಿಸಿದ್ದೇವೆ. ಆದರೆ ಕತ್ತಲಾದ ಕಾರಣ ನಾವು ಹಿಂತಿರುಗಿರುತ್ತೇವೆ. ವಿರಾಜಪೇಟೆ ಘನ ಜೆ.ಎಂ.ಎಫ್.ಸಿ.ನ್ಯಾಯಾಲಯಕ್ಕೆ ಆರೋಪಿಯ ವಿರುದ್ಧ ಪ್ರ.ವ.ವರದಿಯನ್ನು ನಾನೇ ಸಲ್ಲಿಸಿರುತ್ತೇನೆ.

ಸದರಿ ಕೇಸಿನಲ್ಲಿ ತನಿಖೆಯನ್ನು ನಾನೇ ಮುಂದುವರೆಸಿರುತ್ತೇನೆ. ವಿಚಾರಣೆ ಸಂದರ್ಭದಲ್ಲಿ ಸದರಿ ತೋಟ ಯಾರದು ಎಂದು ತಿಳಿದುಕೊಳ್ಳಲು ಪ್ರಯತ್ನಿಸಿದ್ದೆವು. ಆದರೆ ಅಕ್ಕಪಕ್ಕದವರು ಯಾವುದೂ ತಿಳಿಸಿರುವುದಿಲ್ಲ. ಸದರಿ ತೋಟ ಯಾರಿಗೆ ಸೇರಿದೆ ಎಂಬ ವಿಷಯವನ್ನು ಗ್ರಾಮ ಲೆಕ್ಕಾಧಿಕಾರಿಗಳಿಂದ ಕೇಳಿ ತಿಳಿದುಕೊಂಡಿದ್ದೀರ ಎಂಬ ಪ್ರಶ್ನೆಗೆ ಸಾಕ್ಷಿಯು ಕೆಲಸದ ಒತ್ತಡದಿಂದಾಗಿ ತಿಳಿದುಕೊಳ್ಳಲು ಆಗಲಿಲ್ಲ ಎಂದು ತಿಳಿಸಿದರು. ಸದರಿ ಆರೋಪಿಯು ತೋಟದೊಳಗೆ ಓಡಿ ಹೋದಾಗ ನಿಶಾನೆ ಪಿ–1ರ ಸಹಿ ಹಾಕಿರುವ ಪಂಚರು ಆರೋಪಿಯನ್ನು ಹಿಡಿಯಲು ನಮ್ಮೊಂದಿಗೆ ಸಹಕರಿಸಿರುತ್ತಾರೆ. ಬೈಕಿನಲ್ಲಿ ಪ್ಲಾಸ್ಟಿಕ್ ಚೀಲವನ್ನು ಅಬಕಾರಿ ರಕ್ಷಕರಾದ ಹೆಚ್.ಪಿ.ಚಂದ್ರ ಇವರು ಬಿಚ್ಚಿರುತ್ತಾರೆ ಎಂದರೆ ಸರಿ. ಸದರಿ 150 ಸಾರಾಯಿ ಪ್ಯಾಕೇಟುಗಳಲ್ಲಿ ಪ್ಯಾಕೇಟಿನ ಮೇಲೆ ಪ್ರಿಂಟೆಡ್ ಮ್ಯಾಟರ್ ಇತ್ತು. ಅದು ಏನು ಎಂದು ನೆನಪಿರುವುದಿಲ್ಲ. ಸದರಿ 150 ಸಾರಾಯಿ ಪ್ಯಾಕೇಟುಗಳ ಮೇಲೆ ಏನು ಬರೆದುಕೊಂಡಿತ್ತು ಎಂಬ ಅಂಶವನ್ನು ನಿಶಾನೆ ಪಿ–1 ಮಹಜರಿನಲ್ಲಿ ನಾನು ಬರೆಸಿರುವುದಿಲ್ಲ. ಸದರಿ ಮಹಜರಿನಲ್ಲಿ ಈ ಅಂಶವನ್ನು ಬರೆಯಲಿಕ್ಕೆ ಏನಾದರೂ ತೊಂದರೆ ಇತ್ತಾ ಎಂದು ಕೇಳಿದ ಪ್ರಶ್ನೆಗೆ ಸಾಕ್ಷಿಯು ಬೇರೆ ಕಡೆ ಹೋಗಬೇಕಾಗಿರುವುದರಿಂದ ಬರೆಯಲು ಆಗಲಿಲ್ಲ ಎಂದು ತಿಳಿಸಿದರು. ನಿಶಾನೆ ಪಿ–1 ಮಹಜರನ್ನು ಬೈಕನ್ನು ನಿಲ್ಲಿಸಿದ ಜಾಗದಲ್ಲಿ ಸಂಜೆ 6.15ರಿಂದ 6.45ರವರೆಗೆ ಬರೆದಿರುತ್ತೇನೆ. ಈ ಮಹಜರು ಬರೆಯುವ ಸಮಯದಲ್ಲಿ ಕತ್ತಲಾಗಿತ್ತು. ಓಡಿಹೋದ ವ್ಯಕ್ತಿಯ ಹೆಸರನ್ನು ಪಂಚರು ನಮಗೆ ತಿಳಿಸಿರುತ್ತಾರೆ. ಪ್ರಶಾಂತ್ ಎಂಬ ಪಂಚರ ವಾಸ ಸ್ಥಳವಾದ ಮಸಗೋಡು ಗ್ರಾಮ, ನಿಶಾನೆ ಪಿ–1 ಮಹಜರನ್ನು ಬರೆದ ಸ್ಥಳದಿಂದ 100ಕಿ.ಮೀ. ದೂರ ಇದೆ ಎಂದರೆ ಸರಿ. ಮತ್ತೊಬ್ಬ ಪಂಚರ ಹೆಸರಾದ

ಚಂದ್ರೇಗೌಡ ಇವರ ವಾಸಸ್ಥಳವು ಚಿಕ್ಕೋಡಿ ಗ್ರಾಮ, ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಆಗಿರುತ್ತದೆ. ಸದರಿ ಗ್ರಾಮವು ನಿಶಾನೆ ಪಿ–1 ಮಹಜರನ್ನು ಬರೆದ ಜಾಗದಿಂದ 400–500ಕಿ.ಮೀ. ದೂರವಿದೆ ಎಂದರೆ ಸರಿ. ಸದರಿ ಪಂಚರನ್ನು ದೇವಣಗೇರಿ ಗ್ರಾಮಕ್ಕೆ ಬಂದ ಕಾರಣವನ್ನು ಕೇಳಿದಾಗ ಸದರಿಯವರು ವ್ಯಾಪಾರಕ್ಕಾಗಿ ಬಂದಿರುವುದಾಗಿ ತಿಳಿಸಿರುತ್ತಾರೆ ಎಂದು ಸಾಕ್ಷಿ ನುಡಿದಿರುತ್ತಾರೆ. ಸದರಿ ಪಂಚರು ದೇವಣಗೇರಿ ಗ್ರಾಮದಲ್ಲಿ ಎಷ್ಟು ಸಮಯದಿಂದ ವಾಸವಾಗಿದ್ದಾರೆಂಬ ವಿಷಯವನ್ನು ನಾನು ತಿಳಿದುಕೊಂಡಿರುವುದಿಲ್ಲ. ಈ ಕೇಸಿನ ಆರೋಪಿಯಾದ ಐಚಂಡ ಸುನಿಲ್‌ರವರು ಪಂಚರಿಗೆ ಹೇಗೆ ಪರಿಚಯವಾದರು ಎಂಬ ಅಂಶವನ್ನು ನಾನು ವಿಚಾರಿಸಿರುವುದಿಲ್ಲ. ಸದರಿ ಕೇಸಿನ ಆರೋಪಿ ಐಚಂಡ ಸುನಿಲ್ ಎನ್ನುವ ಬಗ್ಗೆ ಸದರಿ ಊರಿನವರನ್ನು ವಿಚಾರಿಸಿ ತಿಳಿದುಕೊಂಡಿರುತ್ತೇನೆ. ಸದರಿ ಊರಿನವರ ಹೆಸರನ್ನು ನಿಶಾನೆ ಪಿ–1 ರಿಂದ –5ರಲ್ಲಿ ಎಲ್ಲಿಯೂ ನಮೂದಿಸಿರುವುದಿಲ್ಲ. ಸದರಿ ಕೇಸಿನಲ್ಲಿ ವಶಪಡಿಸಿಕೊಂಡ ಬೈಕನ್ನು ನಮ್ಮ ಬಾಡಿಗೆ ಜೀಪಿನಲ್ಲಿ ನಮ್ಮ ಕಛೇರಿಗೆ ತೆಗೆದುಕೊಂಡು ಹೋಗಲಾಯಿತು. ವಿರಾಜಪೇಟೆ ಘನ ಜೆ.ಎಂ.ಎಫ್.ಸಿ.ನ್ಯಾಯಾಲಯಕ್ಕೆ ಸುನಿಲ್‌ರವರ ವಿರುದ್ಧ ದೋಷಾರೋಪಣ ಪಟ್ಟಿಯನ್ನು ಸಲ್ಲಿಸಿರುತ್ತೇನೆ.

ಈ ಕೇಸಿನಲ್ಲಿ ಮಾದರಿಗಾಗಿ ತೆಗೆದ ಸಾರಾಯಿ ಪ್ಯಾಕೇಟುಗಳನ್ನು ಘನ ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ಅದೇ ರೀತಿ ರಾಸಾಯನಿಕ ವರದಿಯನ್ನು ಘನ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತೇನೆ. ನಿಶಾನೆ ಪಿ–2ರ ಪ್ರ.ವ.ವರದಿಯಲ್ಲಿ ವರದಿ ಸಂಖ್ಯೆ ತಿದ್ದಿದೆ ಎಂದರೆ ಸರಿ. ವಿರಾಜಪೇಟೆ ಘನ ಜೆ.ಎಂ.ಎಫ್.ಸಿ.ನ್ಯಾಯಾಲಯ ಅಂತಿಮ ವರದಿ ಸಲ್ಲಿಸಿರುವುದಿಲ್ಲ ಎಂದರೆ ಸರಿಯಲ್ಲ. ಸಾರಾಯಿಯನ್ನು ಪ್ಯಾಕೇಟಿಗೆ ತುಂಬಿಸಿದ ಒಂದು ವಾರದೊಳಗೆ ಸೇವಿಸದಿದ್ದಲ್ಲಿ ಅದು ಮಾನವನ ಸೇವನೆಗೆ ಯೋಗ್ಯವಾದುದಲ್ಲ ಎಂದು ಪರಿಗಣಿಸುತ್ತೇವೆ ಎಂದರೆ ಸರಿ. ಪ್ರಕರಣ ದಾಖಲಿಸಿ ಮಾದರಿಗಾಗಿ ತೆಗೆದುಕೊಂಡ ಸಾರಾಯಿ ಪ್ಯಾಕೇಟನ್ನು ಅಮಾನತ್ತು ಪಡಿಸಿಕೊಂಡ ದಿನದಿಂದ 9 ತಿಂಗಳ ನಂತರ ಸದರಿ ಸಾರಾಯಿ ಪ್ಯಾಕೇಟನ್ನು ಪರೀಕ್ಷೆಗಾಗಿ ಕಳುಹಿಸಿರುತ್ತೇನೆ ಎಂದರೆ ಸರಿ. ಪ್ರಕರಣ ದಾಖಲು ಮಾಡಿದ 24 ಗಂಟೆಗಳ ಒಳಗೆ ಅಧಿಕೃತ ಅಧಿಕಾರಿಗಳಿಗೆ ಸಲ್ಲಿಸಬೇಕೆಂದರೆ ಸರಿ. ನಿಶಾನೆ ಪಿ–2ರ ದಾಖಲೆಯನ್ನು ಈ ನ್ಯಾಯಾಲಯಕ್ಕೆ ಫೆಬ್ರವರಿ 20, 2004ರಂದು ಸಲ್ಲಿಸಿರುತ್ತಾರೆ ಎಂದರೆ ಸರಿ. ದಿನಾಂಕ:17–2–04ರಂದು ನಾನು ನನ್ನ ಸಿಬ್ಬಂದಿಯವರೊಂದಿಗೆ ದೇವಣಗೇರಿ ರಸ್ತೆಯಲ್ಲಿ ಗಸ್ತಿಗೆ ಹೋಗಿರುವುದು ಇಲ್ಲ ಎಂಬುದು ಸರಿಯಲ್ಲ. ಸದರಿ ದಿವಸದಂದು ಈ ಮೇಲೆ ಹೇಳಿದ ಬೈಕಿನಲ್ಲಿ ಸಾರಾಯಿ ಪ್ಯಾಕೇಟುಗಳನ್ನು ಸಾಗಾಣಿಕೆ ಮಾಡುತ್ತಿರಲಿಲ್ಲ ಎಂದರೆ ಸರಿಯಲ್ಲ. ನಿಶಾನೆ ಪಿ–1ರ ಮಹಜರನ್ನು ನನ್ನ ಕಛೇರಿಯಲ್ಲಿ ಬರೆದದ್ದು ಎಂದರೆ ಸರಿಯಲ್ಲ. ನಾನು ಮೇಲಾಧಿಕಾರಿಗಳಿಗೆ ಸಲ್ಲಿಸಬೇಕಾದ ಅಂಕಿಅಂಶಕ್ಕಾಗಿ ಸುಳ್ಳು ಪ್ರಕರಣವನ್ನು ದಾಖಲಿಸಿಕೊಂಡು ಸದರಿ ಬೈಕನ್ನು ಜಪ್ತುಪಡಿಸಿಕೊಂಡಿರುತ್ತೇನೆ ಎಂದರೆ ಸರಿಯಲ್ಲ. ನಾನು ಸುಳ್ಳು ಪ್ರಕರಣವನ್ನು ದಾಖಲಿಸುವ ಕಾರಣ ಊರಿನವರು ಸಹಕರಿಸಲಿಲ್ಲ ಎಂದು ಸುಳ್ಳು ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. ನಾನು ಈ ನ್ಯಾಯಾಲಯದಲ್ಲಿ ಸುಳ್ಳು ಹೇಳುತ್ತೇನೆ ಎಂದರೆ ಸರಿಯಲ್ಲ.

ರಕ್ಷಣಾ ಸಾಕ್ಷಿದಾರರಾದ ವಾಹನದ ಮಾಲೀಕರು ಮತ್ತು ಅವರ ಪರ ವಕೀಲರು ಹಾಜರಿದ್ದು ವಾದವಿವಾದಗಳನ್ನು ಮಂಡಿಸಿರುತ್ತಾರೆ. ರಕ್ಷಣಾ ಪರ ವಕೀಲರು ತಮ್ಮ ಲಿಖಿತ ವರದಿಯನ್ನು ಸಲ್ಲಿಸುವುದಾಗಿ ಪ್ರಾಧಿಕಾರದಲ್ಲಿ ನುಡಿದಿದ್ದು ಇಲ್ಲಿಯವರೆಗೆ ಯಾವುದೇ ರೀತಿಯ ವರದಿಯನ್ನು ಸಲ್ಲಿಸಿರುವುದಿಲ್ಲ.ಈ ಪ್ರಾಧಿಕಾರವು ವಾಹನದ ಮಾಲೀಕರು ದೋಷಿಯೋ ಅಥವಾ ನಿರ್ದೋಷಿಯೋ ಎಂಬುದನ್ನು ವಿಚಾರಣೆ ಮಾಡುವ ಕಾರ್ಯಕ್ಕೆ ಹೋಗದೆ ಅಂತಹ ಅಬಕಾರಿ ಅಪರಾಧದಲ್ಲಿ ತೊಡಗಿದ್ದ ವಾಹನದ ಬಗ್ಗೆ ಮಾತ್ರವೇ ವಿಚಾರ ಮಾಡುತ್ತದೆ, ಎಂಬುದನ್ನು ಸ್ಪಷ್ಟಪಡಿಸಬೇಕಾಗುವುದು ಅಗತ್ಯವಾದ ಪ್ರಮುಖ ಅಂಶವಾಗಿರುತ್ತದೆ. ಆದರೆ ನ್ಯಾಯಾಲಯದಲ್ಲಿ ವಿಚಾರಣೆಯಾಗಿ ಆರೋಪಿಯ ಖುಲಾಸೆಗೂ ವಾಹನವನ್ನು ಮುಟ್ಟುಗೋಲು ಹಾಕಿಕೊಂಡಿರುವ ಅಧಿಕೃತ ಅಧಿಕಾರಿಗಳ ನ್ಯಾಯಾಲಯಕ್ಕೂ ಯಾವುದೇ ಸಂಬಂಧವಿರುವುದಿಲ್ಲ. ಅಲ್ಲದೆ ತನಗೆ ಸೇರಿದ ವಾಹನದಲ್ಲಿ ತಾನೇ ಅಬಕಾರಿ ಅಕ್ರಮ ಪದಾರ್ಥ, ವಸ್ತುವನ್ನು ಹೊಂದಿರಲಿ, ಸಾಗಾಣಿಕೆ ಮಾಡುತ್ತಿರಲಿ ಅಥವಾ ಇಲ್ಲದಿರಲಿ ಅದನ್ನು ಸಾಕ್ಷ್ಯಾಧಾರಗಳಿಂದ ದೃಢಪಡಿಸಬೇಕಾಗಿದ್ದು ಸಾಕ್ಷಿಯು ಪ್ರತಿಕೂಲ ಸಾಕ್ಷಿ ನುಡಿದಿದ್ದಾನೆಂಬ ಮಾತ್ರಕ್ಕೆ ಆರೋಪಿಯು ಅಬಕಾರಿ ಅಪರಾಧವೆಸಗಿಲ್ಲವೆಂದು ತೀರ್ಮಾನಕ್ಕೆ ಬರುವಂತಿಲ್ಲ. ಹಾಗೂ ಅಬಕಾರಿ ತನಿಖಾಧಿಕಾರಿಯು ಸುಳ್ಳು ಹಾಗೂ ಅಸತ್ಯದ ಮೊಕದ್ದಮೆಯು ಹೂಡಿದ್ದಾರೆಂದು ಭಾವಿಸುವಂತಿಲ್ಲ. ಅಬಕಾರಿ ತನಿಖಾಧಿಕಾರಿಯ ಸಾಕ್ಷ್ಯವೆಂದೇ ಪರಿಗಣಿಸಬಹುದಾಗಿರುತ್ತದೆ.

ಭಾರತ ದಂಡ ಸಂಹಿತೆ ಸೆಕ್ಷನ್ 302, 324ರಲ್ಲಿ ಅಧಿಕೃತವಾಗಿ ಮತ್ತು ದೈನಂದಿನ ಕರ್ತವ್ಯ ನಿರ್ವಹಿಸುವ ಅಬಕಾರಿ ಅಧಿಕಾರಿಯ ಸಾಕ್ಷವನ್ನು ನಂಬದಿರಲು ಅವಕಾಶವಿರುವುದಿಲ್ಲವೆಂತಲೂ ಹಾಗೂ ತನಿಖಾಧಿಕಾರಿಯ ಸಾಕ್ಷವು ಮೌಲ್ಯವುಳ್ಳದ್ದು ಮತ್ತು ಅವರ ದಾಖಲೆಯನ್ನು, ತನಿಖೆಯನ್ನು ಅಸತ್ಯವೆಂದು ಸಂಶಯಿಸಲು ಯಾವುದೇ ಕಾರಣವಿರದೆಂಬುದನ್ನು ಈ ಕೆಳಕಂಡಂತೆ ದಾಖಲಿಸಲಾಗಿದೆ.

" (A) Indian penal Code- Section 302, 324 – Evidence of Investigating Officer whether can be disbelleved – Held official act of the Police have been regularly performed is a wise principle of presumption – The evidence of investigating officer is rellable one - Facts, further held, the evidence of Police witness is rellable and on record, there is no reason to suspect the truthfulness of the records of the Police investigation."

ಈ ಪ್ರಕರಣದಲ್ಲಿ ಸದರಿ ಅಂಶವನ್ನು ಅನ್ವಯಿಸಿ ಪರಿಗಣಿಸಬಹುದಾಗಿದೆ. ಪ್ರಾಧಿಕಾರದಲ್ಲಿ ಲಭ್ಯವಾಗಿರುವ ದಾಖಲಾತಿಗಳ ಪ್ರಕಾರ ದಿನಾಂಕ:17–2–04ರಂದು ಸ್ಪ್ಲೆಂಡರ್ ಮೋಟಾರು ಬೈಕ್ ನೋಂದಣಿ ಸಂ. ಕೆಎ–12–ಹೆಚ್–1219ರಲ್ಲಿ ಅಕ್ರಮ ಸಾರಾಯಿ ಪ್ಯಾಕೇಟು ಸಾಗಾಟ ಮಾಡುತ್ತಿದ್ದುದನ್ನು ಅಬಕಾರಿ ಉಪ ನಿರೀಕ್ಷಕರು, ಸಂಚಾರ ದಳ, ವಿರಾಜಪೇಟೆ ರವರು ಪತ್ತೆ ಹಚ್ಚಿ ಅಬಕಾರಿ ಕಾಯ್ದೆ ಕಲಂ11, R/W, 14 ರ ಪ್ರಕಾರ ಅಪರಾಧವಾಗಿದ್ದು ಕಲಂ34, 43ಎರ ಪ್ರಕಾರ ಶಿಕ್ಷಾರ್ಹ ಅಪರಾಧ ಎಸಗಿರುವುದರಿಂದ ಪ್ರ.ವ.ವ.ಸಂ:13/2003/04, ದಿನಾಂಕ:17–2–2004ರ ಪ್ರಕಾರ ಪ್ರಕರಣ ದಾಖಲಿಸಿಕೊಂಡು ಅಕ್ರಮ ಸಾರಾಯಿ ಪ್ಯಾಕೇಟು ಸಾಗಾಣಿಕೆಗೆ ಬಳಸಲಾದ ದ್ವಿಚಕ್ರ ವಾಹನ ಮತ್ತು ಸಾರಾಯಿ ಪ್ಯಾಕೇಟುಗಳನ್ನು, ಸ್ಥಳ ಮಹಜರು, ಪಂಚನಾಮೆಯ ಮುಖೇನ ಸ್ವಾಧೀನಪಡಿಸಿಕೊಂಡಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ಮಾದರಿಗಳು ರಾಸಾಯನಿಕ ತಜ್ಞರ ವರದಿಯಂತೆ ಸಾರಾಯಿಯೆಂದು ದೃಢಪಟ್ಟಿರುತ್ತದೆ. ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಬೇರೆಯವರ ಕೈಯಲ್ಲಿ ಕೊಟ್ಟು ಅಕ್ರಮ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಸಾಭೀತಾಗಿರುವುದು ಈ ಪ್ರಾಧಿಕಾರದಲ್ಲಿ ಪ್ರಾಧಿಕೃತ ಅಧಿಕಾರಿಗಳು ಮತ್ತು ಸಹಾಯಕ ಸರ್ಕಾರಿ ಅಭಿಯೋಜಕರು ಈ ಬಗ್ಗೆ ತೀರ್ಮಾನ ತೆಗೆದುಕೊಳ್ಳಲಾಗಿರುತ್ತದೆ. ಹಾಗೂ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಸಾಭೀತಾಗಿರುವುದಾಗಿ ಈ ಪ್ರಾಧಿಕಾರವು ಮನಗಂಡು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ಒಂದನೇ ಅಂಶಕ್ಕೆ ಗುಣಾತ್ಮಕವಾಗಿ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ ಹಾಗೂ ವಾಹನದಲ್ಲಿ ಸಾರಾಯಿ ಪ್ಯಾಕೇಟು ಸಾಗಾಣಿಕೆಯಾಗಿರುವುದರ ಬಗ್ಗೆ ಸೂಕ್ತ ಸಾಕ್ಷ್ಯಾಧಾರಗಳನ್ನು ಸಾಭೀತುಪಡಿಸಲು ವಾಹನದ ಮಾಲೀಕರು ವಿಫಲರಾಗಿರುವುದರಿಂದ ಎರಡನೇ ಅಂಶಕ್ಕೆ ಉತ್ತರ ಇಲ್ಲಾ ಎಂದಾಗುತ್ತದೆ. ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ಇವರು ವಶಪಡಿಸಿಕೊಂಡ ದ್ವಿಚಕ್ರ ವಾಹನ ಸಂ. ಕೆಎ–12–ಹೆಚ್–1219ರ ನೋಂದಣಿ ಸಂಖ್ಯೆಯ ಹೀರೋ ಹೋಂಡ ಸ್ಪ್ಲೆಂಡರ್ ಬೈಕನ್ನು ವಶಪಡಿಸಿಕೊಂಡು ಸುಮಾರು 6ವರ್ಷ ಕಳೆದಿದ್ದು ಈ ಪ್ರಾಧಿಕಾರದಲ್ಲಿ ನಡೆಸಲಾದ ವಿಚಾರಣೆಯಿಂದ ವಾಹನದಲ್ಲಿ ಅಕ್ರಮ ಸಾರಾಯಿ ಪ್ಯಾಕೇಟು ಸಾಗಾಣಿಕೆ ಮಾಡಿರುವುದು ಸಾಭೀತಾಗಿರುವುದರಿಂದ ಮೂರನೇ ಅಂಶದಂತೆ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡುಬಂದ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ.

**ಆದೇಶ**

ಸಿ.ಎಲ್.ಜಯರಾಮ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43 ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಸಂಚಾರ ದಳ, ವಿರಾಜಪೇಟೆ ಇವರ ಪ್ರ.ವ.ವ.ಸಂ.13/2003–04, ದಿನಾಂಕ: 17–2–04 ರಲ್ಲಿ ಅಕ್ರಮ ಸಾರಾಯಿ ಪ್ಯಾಕೇಟು ಸಾಗಾಣಿಕೆಗೆ ಬಳಸಿದ ದ್ವಿಚಕ್ರ ವಾಹನ ಸಂ: ಕೆಎ–12–ಹೆಚ್–1219ರ ಸ್ಪ್ಲೆಂಡರ್ ಬೈಕನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಎ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಹಾಗೂ ಸದರಿ ವಾಹನವನ್ನು 30ದಿನಗೊಳಗಾಗಿ ವಾಹನದ ಮಾಲೀಕರು ಪ್ರಾಧಿಕಾರಕ್ಕೆ ಒಪ್ಪಿಸಲು ಸೂಚಿಸಿದೆ. ತಪ್ಪಿದಲ್ಲಿ ಈಗಾಗಲೇ ವಾಹನದ ಮಾಲೀಕರು ನೀಡಿರುವ ಬ್ಯಾಂಕ್ ಗ್ಯಾರೆಂಟಿಯನ್ನು ಇನ್ವೋಕ್ ಮಾಡಿ ಆರ್‌ಡಿ ಖಾತೆಯಲ್ಲಿಡಲಾಗಿರುವ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಾಗಿ ಸೂಚಿಸಿದೆ.

ಈ ಆದೇಶವನ್ನು ದಿನಾಂಕ:23–3–2010ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

**ಅನುಬಂಧ–1**

ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:

ಪ್ರಾ.ಸಾ.1: ಶ್ರೀ ಎಂ.ಸಿ.ಚಂದ್ರಶೇಖರ್, ಅಬಕಾರಿ ಉಪ ನಿರೀಕ್ಷಕರು, ಸಂಚಾರಿ ದಳ, ವಿರಾಜಪೇಟೆ.

**ಅನುಬಂಧ–2**

ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:

ನಿಶಾನೆ ಪಿ–1 – ಮಹಜರು ಪ್ರತಿ

ನಿಶಾನೆ ಪಿ–1ಎ – ಅದರ ಮೇಲಿನ ಸಹಿ

ನಿಶಾನೆ ಪಿ–2 – ಪ್ರಥಮ ವರ್ತಮಾನ ವರದಿ

ನಿಶಾನೆ ಪಿ–2ಎ – ಅದರ ಮೇಲಿನ ಸಹಿ

ನಿಶಾನೆ ಪಿ–3 – ಸ್ವತ್ತಿನ ಪಟ್ಟಿ

ನಿಶಾನೆ ಪಿ–3ಎ – ಅದರ ಮೇಲಿನ ಸಹಿ

ನಿಶಾನೆ ಪಿ–4 – ವಶಪಡಿಸಿಕೊಂಡ ಸ್ವತ್ತುಗಳ ವರದಿ ಪ್ರತಿ

ನಿಶಾನೆ ಪಿ–4ಎ – ಅದರ ಮೇಲಿನ ಸಹಿ

ನಿಶಾನೆ ಪಿ–5 – ವಶಪಡಿಸಿಕೊಂಡ ಸ್ವತ್ತುಗಳನ್ನು ವಶದಲ್ಲಿಟ್ಟುಕೊಳ್ಳಲು ಅಧಿಕೃತ ಅಧಿಕಾರಿಗಳ ಅನುಮತಿ ಪತ್ರ 457ರ ಪ್ರತಿ.

**ಅನುಬಂಧ–3**

ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು ಯಾವುದೂ ಇಲ್ಲ.

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್.540

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂ.ಸಿ.ಎ./ಸಿ.ಆರ್–06/ಎಫ್.ಸಿ./2010, ದಿನಾಂಕ:11ನೇ ಮಾರ್ಚ್, 2010**

**ಅರ್ಜಿದಾರರು**

1) ಶ್ರೀ ಬಿ. ರಘುರಾಮ್ ನಾಯಕ್ (65 ವರ್ಷ)
S/o ಶ್ರೀನಿವಾಸ್ ನಾಯಕ್,
2) ಶ್ರೀಮತಿ ಶಶಿಕಲಾ (62 ವರ್ಷ)
W/o ಶ್ರೀ ಬಿ. ರಘುರಾಮ್ ನಾಯಕ್
3) ಮಂಗಳಾ (25 ವರ್ಷ)
D/o ಶ್ರೀ ಬಿ. ರಘುರಾಮ್ ನಾಯಕ್
ವಾಸ: ಶ್ರೀ ದುರ್ಗಾ ನಿಲಯ, ಕೋಟೇಶ್ವರ ಪೋಸ್ಟ್, ಕುಂದಾಪುರ ತಾಲ್ಲೂಕು.

**ಪ್ರತಿವಾದಿಗಳು**

1) ಪ್ರಕಾಶ್ ಬೆಟ್ಟನ್, ಬಿನ್ ನರಸಿಂಹ ಶೇರಿಗಾರ,
ವಾಸ: ಪಂಚಾಮೃತ, ಬೀಚ್ ರೋಡ್ ಕೋಟೇಶ್ವರ, ಕುಂದಾಪುರ.
2) ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.,
ಐ.ಸಿ.ಐ.ಸಿ.ಐ. ಲಾಂಬೋರ್ಡ್ ಜನರಲ್ ಇನ್ಸೂರೆನ್ಸ್ ಕಂಪೆನಿ ಲಿಂ., ಜೆನತ್ ಹೌಸ್, ಕೇಶವರಾವ್ ಖಾದ್ಯಡ್ ಮಾರ್ಗ, ರೇಸ್‌ಕೋರ್ಸ್ ಮಹಾಲಕ್ಷ್ಮಿ ಎದುರು, ಮುಂಬಯಿ–400034.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಬಿ. ರಘುರಾಮ ನಾಯಕ್ ತಮ್ಮ ಮಗನಾದ ನಾಗರಾಜ್ ಇವರು 1ನೇ ಪ್ರತಿವಾದಿಯವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:13.01.2010ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಎಂ. ಆನಂದಮೂರ್ತಿ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್.400

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂ.ಸಿ.ಎ./ಸಿ.ಆರ್–09/ಎಫ್.ಸಿ./2010, ದಿನಾಂಕ:7ನೇ ಏಪ್ರಿಲ್, 2010**

**ಅರ್ಜಿದಾರರು**

1) ಶ್ರೀ ಮೋಹನ್ ಮಂಡಲ್ (43 ವರ್ಷ)
2) ಶ್ರೀಮತಿ ವಿಹಿಲಾ ದೇವಿ (37 ವರ್ಷ)
W/o ಶ್ರೀ ಮೋಹನ್ ಮಂಡಲ್,
3) ಮಿಥುನ್ ಕುಮಾರ್ (16 ವರ್ಷ)
S/o ಶ್ರೀ ಮೋಹನ್ ಮಂಡಲ್
4) ಪ್ರಾಚಿ ಕುಮಾರಿ (9 ವರ್ಷ)
D/o ಶ್ರೀ ಮೋಹನ್ ಮಂಡಲ್
5) ಗೌರಿ ಕುಮಾರಿ (6 ವರ್ಷ)
D/o ಶ್ರೀ ಮೋಹನ್ ಮಂಡಲ್
ಎಲ್ಲಾ ವಾಸ: ನವತೊಲ್ಲಾ ತೆಲ್ಗಿ ಗ್ರಾಮ, ಕಹರಿಕ್ ಬಜಾರ್ ಪೋಸ್ಟ್, ನರ್ಮ್‌ಗಚಿಯಾ ತಾಲ್ಲೂಕು, ಬಾಗಲ್‌ಪುರ ಜಿಲ್ಲೆ, ಬಿಹಾರ.

**ಪ್ರತಿವಾದಿಗಳು**

1) ಮೆ॥ ಪವರ್‌ಮೆಕ್ ಪ್ರೋಜೆಕ್ಟ್ ಲಿ.,
ಲೋಹಿಯಾ ಟವರ್ಸ್, ನಿರ್ಮಲ ಕಾನ್ವೆಂಟ್ ರಸ್ತೆ, ಪಟಮಟ, ವಿಜಯವಾಡ, ಆಂಧ್ರಪ್ರದೇಶ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಮೋಹನ್ ಮಂಡಲ್ ಇವರು ತಮ್ಮ ಮಗನಾದ ನಿವಾಸ್ ಕುಮಾರ್ ಇವರು 1ನೇ ಪ್ರತಿವಾದಿಯವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:13.07.2009ರಂದು ಅಪಘಾತಕ್ಕೀಡಾಗಿ ದಿನಾಂಕ:14.07.2009ರಂದು ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಎಂ. ಆನಂದಮೂರ್ತಿ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್.636

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ,**
**ರಾಮನಗರ ಜಿಲ್ಲೆ, ರಾಮನಗರ**

**ಪ್ರಕಟಣೆ ಸಂಖ್ಯೆ: ಕಾಅರಾ/ಕಾನಪ/ಮರಣ/ಸಿಆರ್–07/2010, ದಿನಾಂಕ:20ನೇ ಮಾರ್ಚ್, 2010**

**ಅರ್ಜಿದಾರರು**

1) ಶ್ರೀಮತಿ ಸರೋಜಮ್ಮ ಕೋಂ ಲೇಟ್ ಬಸವರಾಜು,
2) ಕು. ರಮ್ಯ ಬಿನ್ ಲೇಟ್ ಬಸವರಾಜು
3) ಕು. ಸೌಮ್ಯ ಬಿನ್ ಲೇಟ್ ಬಸವರಾಜು
4) ಮಹೇಶ್ ಬಿನ್ ಲೇಟ್ ಬಸವರಾಜು.
ಯರೇಹಳ್ಳಿ ವಿಲೇಜ್, ರಾಮನಗರ ತಾಲ್ಲೂಕು:ಜಿಲ್ಲೆ.

**ಪ್ರತಿವಾದಿಗಳು**

ಶ್ರೀ ಸಿ.ಎಸ್. ಶ್ರೀನಿವಾಸ ಬಿನ್ ಸಿ. ಸಿಂಗ್ರಿಗೌಡ, ಟ್ರಾಕ್ಟರ್ ಟೇಲರ್ ಮಾಲೀಕರು.
ಸಂಖ್ಯೆ: ಕೆಎ–05/ಟಿ–2758,
ಚಿಕ್ಕೇನಹಳ್ಳಿ ವಿಲೇಜ್, ಚಿಕ್ಕಮುದವಾಡಿ ಪೋಸ್ಟ್, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:03.12.2009 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1ನೇ ಅರ್ಜಿದಾರರ ಪತಿಯಾದ ಹಾಗೂ 2ನೇ, 3ನೇ ಮತ್ತು 4ನೇ ಅರ್ಜಿದಾರರ ತಂದೆಯಾದ ಬಸವರಾಜು ಎಂಬುವವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿಯವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಕಾರ್ಮಿಕ ನಷ್ಟ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೀನಾಪಾಟೀಲ**
ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರವರ ನ್ಯಾಯಾಲಯ,
ರಾಮನಗರ ಜಿಲ್ಲೆ, ರಾಮನಗರ.

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ,**
**ರಾಮನಗರ ಜಿಲ್ಲೆ, ರಾಮನಗರ**

**ಪ್ರಕಟಣೆ ಸಂಖ್ಯೆ: ಕಾಅರಾ/ಕಾನಪ/ಮರಣ/ಸಿಆರ್–08/2010, ದಿನಾಂಕ:20ನೇ ಮಾರ್ಚ್, 2010**

**ಅರ್ಜಿದಾರರು**

1) ಪದ್ಮಮ್ಮ ಕೋಂ ಹೊಂಬಾಳಯ್ಯ,
2) ಹೊಂಬಾಳಯ್ಯ ಬಿನ್ ಲೇಟ್ ಕಡಯ್ಯ,
3) ರೇಣುಕಾ ಬಿನ್ ಹೊಂಬಾಳಯ್ಯ, ಕೂಟಗಲ್ ವಿಲೇಜ್, ಕೂಟಗಲ್ ಹೋಬಳಿ, ರಾಮನಗರ ತಾಲ್ಲೂಕು: ಜಿಲ್ಲೆ.

**ಪ್ರತಿವಾದಿಗಳು**

1) ಸರ್ವಮಂಗಳ ಕೋಂ ಲೇಟ್ ಸಿ.ಬಿ. ಹೊನ್ನಯ್ಯ,
1(ಎ) ಮಹೇಶ್ ಬಿನ್ ಸಿ.ಬಿ. ಹೊನ್ನಯ್ಯ.
1(ಬಿ) ಹೆಚ್. ಗುರುಪಾದಸ್ವಾಮಿ, ಬಿನ್ ಸಿ.ಬಿ. ಹೊನ್ನಯ್ಯ ಚೌಡೇಶ್ವರಿ ಹಳ್ಳಿ, ಕೂಟಗಲ್ ಹೋಬಳಿ, ರಾಮನಗರ ತಾಲ್ಲೂಕು: ಜಿಲ್ಲೆ.
2) ದಿ ಮ್ಯಾನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿ., ನಂ.2240/4, 1ನೇ ಫ್ಲೋರ್, ಗಿರಿಯಮ್ಮ ಶಂಭುಗೌಡ ಕಾಂಪ್ಲೆಕ್ಸ್, ಚರ್ಚ್‌ರಸ್ತೆ, ಚನ್ನಪಟ್ಟಣ.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:11.03.2010 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1ನೇ ಮತ್ತು 2ನೇ ಅರ್ಜಿದಾರರ ಮಗನಾದ ರಾಮಚಂದ್ರ ಎಂಬುವವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿಯವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಕಾರ್ಮಿಕ ನಷ್ಟ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೀನಾಪಾಟೀಲ**
ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರವರ ನ್ಯಾಯಾಲಯ,
ರಾಮನಗರ ಜಿಲ್ಲೆ, ರಾಮನಗರ.

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ರಾಮನಗರ ಜಿಲ್ಲೆ, ರಾಮನಗರ**

**ಪ್ರಕಟಣೆ ಸಂಖ್ಯೆ: ಕಾಅರಾ/ಕಾನಪ/ಮರಣ/ಸಿಆರ್–09/2010, ದಿನಾಂಕ:20ನೇ ಮಾರ್ಚ್, 2010**

**ಅರ್ಜಿದಾರರು**

1) ಪುಟ್ಟಮ್ಮ ಕೋಂ ಮರಿಯಪ್ಪ

2) ಮರಿಯಪ್ಪ ಬಿನ್ ದೊಡ್ಡಯ್ಯ,

ಹನಿಯೂರು ಗ್ರಾಮ, ವಿರೂಪಾಕ್ಷಿಪುರ ಹೋಬಳಿ, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ.

**ಪ್ರತಿವಾದಿಗಳು**

1) ಜನರಲ್ ಮ್ಯಾನೇಜರ್,

"ಸೋಡೆಕ್ಸ್", ನಂ.110/1, ಎಂ. ಕೃಷ್ಣಪ್ಪ ಲೇಔಟ್, ಇಂಡಿಯನ್ ಆಯಿಲ್ ಕಾರ್ಪೋರೇಷನ್ ಎದುರು, ಪೆಟ್ರೋಲ್ ಬಂಕ್, ಲಾಲ್‌ಬಾಗ್ ರೋಡ್, ಬೆಂಗಳೂರು–560 027.

2) ಪ್ರಿನ್ಸಿಪಾಲ್,

ಶ್ರೀ ಭಗವಾನ್ ಮಹಾವೀರ ಜೈನ್ ಕಾಲೇಜ್ ಆಫ್ ಇಂಜಿನಿಯರಿಂಗ್, ಜಕ್ಕಸಂದ್ರ ವಿಲೇಜ್, ಮರಳವಾಡಿ ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:05.02.2010 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1ನೇ ಮತ್ತು 2ನೇ ಅರ್ಜಿದಾರರ ಮಗನಾದ ಎಮ್. ಶಿವಕುಮಾರ್ ಎಂಬುವವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿಯವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಕಾರ್ಮಿಕ ನಷ್ಟ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಮೀನಾಪಾಟೀಲ**

ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ರಾಮನಗರ ಜಿಲ್ಲೆ, ರಾಮನಗರ.

ಪಿ.ಆರ್.515

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ.**

**ಪ್ರಕರಣ ಸಂಖ್ಯೆ: ಕಾಅಬಿ–2:ಕಾನಪ:ಮಪ್ರ–50/2010, ದಿನಾಂಕ:11ನೇ ಮಾರ್ಚ್, 2010**

**ಅರ್ಜಿದಾರರು**

ಶ್ರೀಮತಿ ಮಹಾದೇವಿ ಗಂಡ ಭೀಮನಗೌಡ, ಬಿರಾದಾರ ಮತ್ತು ಇತರರು, ಸಾ:ಬಮ್ಮನಹಳ್ಳಿ, ತಾ:ಮುದ್ದೇಬಿಹಾಳ, ಜಿ:ವಿಜಾಪುರ.

**ಪ್ರತಿವಾದಿಗಳು**

1) ಶ್ರೀ ಅಬ್ದುಲಾಜಿಜ ತಂದೆ ಖಸಿಮಸಾಬ ಬಾಗವಾನ, ಸಾ:942, ತಾಳಿಕೋಟೆ, ತಾ: ಮುದ್ದೇಬಿಹಾಳ, ಜಿ: ವಿಜಾಪುರ.

2) ದಿ ಡಿವಿಜನಲ್ ಮ್ಯಾನೇಜರ್

ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ವಿಜಾಪುರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಭೀಮನಗೌಡ ತಂದೆ ಗುರನಗೌಡ ಬಿರಾದಾರ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ

ದಿನಾಂಕ:20.06.2009 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪವಿಭಾಗ–2,
ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ.**

**ಪ್ರಕರಣ ಸಂಖ್ಯೆ: ಕಾಅಬಿ–2:ಕಾನಪ:ಮಪ್ರ–51/2010, ದಿನಾಂಕ:17ನೇ ಮಾರ್ಚ್, 2010**

| **ಅರ್ಜಿದಾರರು** | **ಪ್ರತಿವಾದಿಗಳು** |
| --- | --- |
| ಆರ್. ಕಲ್ಯಾಣಿಬಾಯಿ ಗಂಡ ಆರ್. ರಾಜಾನಾಯಕ, ನಾಯಕ ಮತ್ತು ಇತರರು, ಸಾ: ಮಲಕಾಲವ ಪೋಸ್ಟ್, ತಾ:ಅನಂತಪುರ, ಜಿ:ವಿಜಾಪುರ. | 1) ಶ್ರೀ ರಾಜಪ್ಪ ಓ ತಂದೆ ಓ ಕೇಶವಳಯ್ಯ, 5–65 ಓಬುಲನಯುನಿಪಲ್ಲಿ (ವಿ) ಧರ್ಮಾವರಂ, ಅನಂತಪುರಂ ಜಿಲ್ಲಾ, ಆಂಧ್ರಪ್ರದೇಶ.<br>2) ಶ್ರೀ ರಾಮ ಜನರಲ್ ಇನ್ಸೂರೆನ್ಸ್ ಕಂ.ಲಿ., ಸೀತಾಪುರ, ಜೈಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ರಾಜಾನಾಯಕ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:22.02.2010 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು
ಕಾರ್ಮಿಕ ಅಧಿಕಾರಿ, ಉಪವಿಭಾಗ–2,
ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ.**

**ಪ್ರಕರಣ ಸಂಖ್ಯೆ: ಕಾಅಬಿ–2:ಕಾನಪ:ಮಪ್ರ–55/2010, ದಿನಾಂಕ:17ನೇ ಮಾರ್ಚ್, 2010**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಮಮತಾಜ ಬೇಗಂ ಗಂಡ ಮಹ್ಮದ ಅಯುಬ ಮುನ್ನಿ ಮತ್ತು ಇತರರು, ಸಾ:ಮುದ್ದೇಬಿಹಾಳ, ಜಿ:ವಿಜಾಪುರ. | 1) ಶ್ರೀ ಮಹ್ಮದ ರಫೀಕ್ ತಂದೆ ಅಹ್ಮದ ಸಾಹೇಬ ಮುನ್ನಿ, ಸಾ:ವಾರ್ಡ್ ನಂ.25, ಮುಸತಾಫ ಕಾಂಪ್ಲೆಕ್ಸ್, ವಿಜಾಪುರ. 2) ದಿ ಬ್ರ್ಯಾಂಚ್ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ವಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಮಹ್ಮದ ಅಯುಬ್ ಮುನ್ನಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:29.02.2010 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು ಕಾರ್ಮಿಕ
ಅಧಿಕಾರಿ, ಉಪವಿಭಾಗ–2, ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ.**

**ಪ್ರಕರಣ ಸಂಖ್ಯೆ: ಕಾಅಬಿ–2:ಕಾನಪ:ಮಪ್ರ–65/2010, ದಿನಾಂಕ:18ನೇ ಮಾರ್ಚ್, 2010**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಶ್ರೀಮತಿ ಶಾಂತಾ ಗಂಡ ವಿಠಲ್ ಕಾಂಬ್ಳೆ, ಮತ್ತು ಇತರರು, ಸಾ:ಜಲನಗರ, ವಿಜಾಪುರ. | 1) ಮಿ. ಪೋಪಟ್ ಸೊಮಾಜಿ ಶೆಲ್ಕೆ, ಪೋಸ್ಟ್, ಆಸ್ತಾ, ಧನಗಾರ ಗಲ್ಲಿ, ತಾ:ವನ್ವಾ ಜಿಲ್ಲಾ: ಸಾಂಗ್ಲಿ ಮಹಾರಾಷ್ಟ್ರ. 2) ದಿ ಮ್ಯಾನೇಜರ್, ನ್ಯೂ ಇಂಡಿಯಾ ಅಶುರನ್ಸ್ ಕಂ.ಲಿ., ವಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ವಿಠಲ್ ತಂದೆ ಜಯರಾಮ ಕಾಂಬ್ಳೆ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:22.02.2010 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು ಕಾರ್ಮಿಕ
ಅಧಿಕಾರಿ, ಉಪವಿಭಾಗ–2, ಬಿಜಾಪುರ.

ಪಿ.ಆರ್.563

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಉಪವಿಭಾಗ, ಹಾಸನ**

**ಸಂಖ್ಯೆ:ಡಬ್ಲ್ಯೂಸಿಎ:ಎಫ್:ಎಸ್‌ಆರ್–11:2010, ದಿನಾಂಕ:26ನೇ ಮಾರ್ಚ್, 2010**

**ಅರ್ಜಿದಾರರು**

1) ಶ್ರೀಮತಿ ಜಯಮ್ಮ ಕೋಂ ಚಂದ್ರೇಗೌಡ @ ಸಣ್ಣ ಮಂಜೇಗೌಡ.

2) ಚಂದ್ರೇಗೌಡ @ ಸಣ್ಣ ಮಂಜೇಗೌಡ ಬಿನ್ ಪುಟ್ಟೇಗೌಡ

3) ವಿದ್ಯಾಶ್ರೀ ಬಿನ್ ಚಂದ್ರೇಗೌಡ ಸಣ್ಣ ಮಂಜೇಗೌಡ, ಮಾಯಸಂದ್ರ ಗ್ರಾಮ, ದುದ್ದ ಹೋಬಳಿ, ಹಾಸನ ತಾಲ್ಲೂಕು, ಹಾಸನ.

**ಪ್ರತಿವಾದಿಗಳು**

1) ವಿ. ಮಂಜು @ ಮಂಜುನಾಥ ಬಿನ್ ವೇಲಾಯಿದನ್ ನಂ.233, ರಾಜಣ್ಣ ಬಿಲ್ಡಿಂಗ್, ಚಿಕ್ಕ ಬಿದರಕಲ್ಲು, ರೇವಣ್ಣ ಲೇಔಟ್, ನಾಗಸಂದ್ರ ಅಂಚೆ, ಬೆಂಗಳೂರು.

2) ರೀಜನಲ್ ಮ್ಯಾನೇಜರ್ ಶ್ರೀರಾಮ್ ಜನರಲ್ ಇನ್ಸೂರೆನ್ಸ್ ಕಂ.ಲಿ., ಮತ್ತು ಶ್ರೀರಾಮ್ ಚಿಟ್ಸ್ ಕಂ. ಪ್ರೈ. ಲಿಮಿಟೆಡ್ ವಿಲ್ಸನ್ ಗಾರ್ಡನ್, ಬೆಂಗಳೂರು–27 ಮತ್ತು ಹಾಸನ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರಘು, ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:23.01.2010 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗೆ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್**

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಉಪವಿಭಾಗ, ಹಾಸನ.

ಪಿ.ಆರ್.539

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಮಂಡ್ಯ ಉಪವಿಭಾಗ–2, ಮಂಡ್ಯ ಇವರ ನ್ಯಾಯಾಲಯ**

**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:ಸಿಆರ್–1:2010, ದಿನಾಂಕ:30ನೇ ಮಾರ್ಚ್, 2010**

**ಅರ್ಜಿದಾರರು**

ಶ್ರೀ ದಾಯನಂದಯ್ಯ
ಕೋರ್ಟರ್ಸ್ ನಂ.ಎಫ್–11, ಎಸ್‌ಸಿಎಸ್‌ಎಲ್ ಕ್ಯಾಂಪ್ಸ್, ಶ್ರೀ ಚಾಮುಂಡೇಶ್ವರಿ ಷುಗರ್ಸ್ ಲಿ., ಭಾರತೀನಗರ, ಮದ್ದೂರು ತಾಲ್ಲೂಕು.

**ಪ್ರತಿವಾದಿಗಳು**

ಶ್ರೀ ಚಾಮುಂಡೇಶ್ವರಿ ಷುಗರ್ಸ್ ಲಿ.,
ಕೆ.ಎಂ.ದೊಡ್ಡಿ, ಭಾರತೀನಗರ, ಮದ್ದೂರು ತಾಲ್ಲೂಕು.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಪ್ರತಿವಾದಿಯವರು ದಿನಾಂಕ:06.01.2010ರಂದು ಈ ನ್ಯಾಯಾಲಯಕ್ಕೆ ಪತ್ರವನ್ನು ಸಲ್ಲಿಸಿ, ಶ್ರೀ ಮಹೇಶ ಎನ್.ಡಿ. ಇವರು ಮೃತಪಟ್ಟಿರುವುದರಿಂದ ಆತನ ಅವಲಂಬಿತರಿಗೆ ವಿತರಿಸಬೇಕಾದ ಪರಿಹಾರವನ್ನು ಈ ನ್ಯಾಯಾಲಯದಲ್ಲಿ ಠೇವಣಿ ಮಾಡಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಮಂಡ್ಯ ಉಪವಿಭಾಗ–2 ಮಂಡ್ಯ–571401.

ಪಿ.ಆರ್.560

**IN THE COURT OF 6TH ACMM ADDL. CHIEF METROPOLITAN MAGISTRATE BANGALORE CITY**

It is here by notified to the public that the Adugodi police station, Bangalore City, have seized the following Vehicle's has unclaimed and such vehicle's are leying in the police station as unclaimed so for. Hence the owner's of the properties (Vehicle's) may put they claim on month from the date of this publication.

Bangalore City. 6th Addl. Chief Metropolitan Magistrate Court,

Dt: Bangalore City.

List of unclaimed vehicle's are Leying in Adugodi police station Bangalore City, Which have been seized Under C-Misc Case.

| Sl. No. | C Misc No & P.F. No. | Type of Vehicle & Reg No. | Eng No. | Cha No. |
|---|---|---|---|---|
| 1. | C Misc No.571/05 P.F.No.90/05 | RX-135 Yamaha M/C No. EX-284 | - | - |
| 2. | C Misc No.105/06 P.F. No.14/06 | Hero Honda M/C No.KA-31 J-5910 | - | - |
| 3. | C Misc No.69/07 P.F. No.03/07 | Bajaj Scooter No. CAL-9136 | - | - |
| 4. | C Misc No.197/07 P.F.No.18/07 | Bajaj Chetak KA-02-j-8936 | 06H93CO-9304 | - |
| 5. | C Misc No.197/07 P.F.No.18/07 | Bajaj Chetak CKK-5109 | 10E128468 | 10E128468 |
| 6. | C Misc No.229/07 P.F.No.21/07 | Kinetic Honda KA-8807 | 293308NNHG | - |
| 7. | C Misc No.229/07 P.F.No.21/07 | Yamaha M/C CTO-2083 | ID102748 | LIO27485 |
| 8. | C Misc No.229/07 P.F.No.21/07 | Kinetic Honda KA-05-E-664 | 123834NTEF | AGFF125183 |
| 9. | C Misc No.230/07 P.F.No.22/07 | Suzuki Shogan M/C KA-03-U-5537 | - | 880-F-950200 |
| 10. | C Misc No.230/07 P.F. No.22/07 | Bajaj Chetak S/C KA-05-S-2786 | 06496872017 | 0696833931 |
| 11. | C Misc No.230/07 P.F.No.22/07 | Kinetic Honda M/C KA-4-J-1278 | 325036NIE-HL | - |
| 12. | C Misc No.233/07 P.F.No.23/07 | Kinetic Honda KA-01-J-4553 | 438657-NEE | - |

| Sl. No. | C Misc No & P.F. No. | Type of Vehicle & Reg No. | Eng No. | Cha No. |
|---|---|---|---|---|
| 13. | C Misc No.233/07<br>P.F.23/07 | Hero Honda CD-100<br>KA-03-W-8277 | - | 98KIOFO2866 |
| 14. | C Misc No.233/07<br>P.F.No.23/07 | TVS Champ<br>KA-01-2803 | L6O1F266265 | L601F266265 |
| 15. | C Misc No.234/07<br>P.F.No.24/07 | Vespa S/C<br>MGO-4472 | 446812M112160 | - |
| 16. | C Misc No.234/07<br>P.F.No.24/07 | Bajaj Sunny<br>KA-04-S-9519 | 331MBPA14529 | - |
| 17. | C Misc No.234/07<br>P.F.No.24/07 | Bajaj Chetak S/C<br>CAI-983 | 138206232308 | - |
| 18. | C Misc No.235/07<br>P.F.No.25/07 | Hero Honda M/C<br>KA-04-ME-537 | - | 010F168264 |
| 19. | C Misc No.235/07<br>P.F.No.25/07 | Bajaj Chetak<br>KA-05-CD-4200 | CDGL5052766 | 06C6808444 |
| 20. | C Misc No.235/07<br>P.F.No.25/07 | Lamrate S/C<br>CAK-7235 | - | - |
| 21. | C Misc No.285/07<br>P.F.No.31/07 | Suzuki Samurai<br>KA-05-EH-1019 | 7112M150063 | 7112F094760 |
| 22. | C Misc No.134/09<br>P.F.No.13/09 | Bajaj Discover<br>KA-02-EQ-5963 | DSVBLL38119 | DSGBLL38232 |
| 23. | C Misc No.134/09<br>P.F.No.13/09 | TVS Victor<br>AP-10-AA-6070 | 3301F377815 | N3301M380081 |

**By Order**

PR-656

Sheristedar

6th ACMM Court, Bangalore City.

**ಅಧ್ಯಾಯ–15**

**ಕರ್ನಾಟಕ ಸರ್ಕಾರ**

**ಭಾಷಾಂತರ ನಿರ್ದೇಶನಾಲಯ**

**ಅಧಿಸೂಚನೆ**

ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (ಕೇಂದ್ರ ಅಧಿನಿಯಮ ಸಂಖ್ಯೆ 25005ರ 22) ಪ್ರಕರಣ 2 ಖಂಡ (ಹೆಚ್) ಉಪಖಂಡ (ಸಿ) ಮತ್ತು (ಡಿ) ಮೇರೆಗೆ ಹಾಗೂ ಪ್ರಕರಣ 5ರ (1) ಮತ್ತು (2)ನೇ ಖಂಡದ ಮೇರೆಗೆ ಭಾಷಾಂತರ ನಿರ್ದೇಶನಾಲಯಕ್ಕೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಪ್ರಾಧಿಕಾರವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗೊತ್ತುಪಡಿಸಲಾಗಿದೆ.

| ಭಾಷಾಂತರ ನಿರ್ದೇಶನಾಲಯ | ಸಾರ್ವಜನಿಕ ಪ್ರಾಧಿಕಾರ |
|---|---|
| ಸಹಾಯಕ ಆಡಳಿತಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು. | ರಾಜ್ಯ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ |
| ಉಪ ನಿರ್ದೇಶಕರು-1, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು. | ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿ |
| ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು. | ಮೊದಲ ಅಪೀಲು ಅಧಿಕಾರಿ |

ಪಿ.ಆರ್.664 ನಿರ್ದೇಶಕರು.

## ಭೂ ದಾಖಲೆಗಳ ಜಂಟಿ ನಿರ್ದೇಶಕರು, ಮರುಭೂಮಾಪನ, ಬೆಳಗಾವಿ

## ಅಧಿಸೂಚನೆ

**ಸಂಖ್ಯೆ:ಮರುಭೂಮಾಪನ:ನೋ:12/2010-11, ದಿನಾಂಕ:1ನೇ ಏಪ್ರಿಲ್, 2010**

ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 106 ಹಾಗೂ ಘನ ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಕಂ.ಇ/29/ಭೂದಾಸ/2009, ದಿನಾಂಕ:20.02.2009ರ ಮೇರೆಗೆ 109, 112 ಹಾಗೂ 152ರಲ್ಲಿ ನಿಹಿತವಾದ ಅಧಿಕಾರದ ಮೇರೆಗೆ ಬೆಳಗಾವಿ ಜಿಲ್ಲೆಯ ಬೆಳಗಾವಿ ತಾಲ್ಲೂಕಿನ ಈ ಕೆಳಕಂಡ ಗ್ರಾಮದಲ್ಲಿ ಮರುಭೂಮಾಪನ ಹಾಗೂ ಮರುಭೂವರ್ಗೀಕರಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ.

ಮೇಲ್ಕಂಡ ಯೋಜನೆಯಲ್ಲಿ ಬರತಕ್ಕ ಗ್ರಾಮದ ಎಲ್ಲಾ ಹಿಡುವಳಿದಾರರು/ ಮಾಲೀಕರು ಅಳತೆಗೆ ಬರತಕ್ಕ ಮೋಜಣಿದಾರರಿಗೆ ಅಗತ್ಯ ಸಹಾಯವನ್ನು (ಕೂಲಿಗಳನ್ನು ಒದಗಿಸುವುದು ಇತ್ಯಾದಿ) ಪೂರೈಸತಕ್ಕದ್ದು.

ಭೂದಾಖಲೆಗಳ ಜಂಟಿ ನಿರ್ದೇಶಕರು,
ಮರುಭೂಮಾಪನ, ಬೆಳಗಾವಿ.

| ಅ.ನಂ. | ತಾಲ್ಲೂಕು | ಹೋಬಳಿ | ಗ್ರಾಮಗಳ ಹೆಸರು |
|---|---|---|---|
| 1. | ಬೆಳಗಾವಿ | ಕಾಕತಿ | ಅಗಸಗಿ |

**ಷರಾ:** ಭೂಮಾಪನ ತಂಡವು ಆಯಾ ಗ್ರಾಮಗಳಲ್ಲಿ ಬರತಕ್ಕ ಸರ್ಕಾರಿ ನಂಬರುಗಳನ್ನು ಅಳತೆ ಮಾಡಿ ಸುತ್ತೋಲೆಯಂತೆ ದಾಖಲೆಗಳನ್ನು ತಯಾರಿಸುವುದು.

ಭೂದಾಖಲೆಗಳ ಜಂಟಿ ನಿರ್ದೇಶಕರು,
ಪಿ.ಆರ್.657 ಮರುಭೂಮಾಪನ, ಬೆಳಗಾವಿ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪ ವಿಭಾಗ-2, ಬೈಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು-2, ಇವರ ನ್ಯಾಯಾಲಯ

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್-4/2010 ಎಫ್, ದಿನಾಂಕ:25ನೇ ಮಾರ್ಚ್, 2010**

**ಅರ್ಜಿದಾರರು**

1) ಶ್ರೀಮತಿ ರುಖ್ಸಿ ಗಂಡ ದಿವಂಗತ ರಹೀಂ @ ರಹೀಮಾನ್, 31 ವರ್ಷ
2) ಆಯಿಶತ್ ತೌಸೀನಾ, 12 ವರ್ಷ
3) ಆಯಿಶತ್ ತಸ್ರೀಪಾ 11 ವರ್ಷ
4) ಆಯಿಶತ್ ಔಯಿಬಾ, 8 ವರ್ಷ
5) ಪಾತೀಮಾತ್ ಶಾಹೀದಾ 4 ವರ್ಷ
(ಮೃತ ರಹೀಂ ಮಕ್ಕಳು)
6) ಶ್ರೀಮತಿ ಮರಿಯಮ್ಮ ಪ್ರಾಯ 56 ವರ್ಷ, ಮೃತರ ತಾಯಿ.
'ಹೊಸಮಜಲು ಮನೆ' ಕಾಕ್ರಾಡಿ ಗ್ರಾಮ ಪುತ್ತೂರು ತಾಲ್ಲೂಕು.

**ಪ್ರತಿವಾದಿಗಳು**

1) ವಿಶ್ವನಾಥ ಸುವರ್ಣ ತಂದೆ ಶೇಷಪ್ಪ ಪೂಜಾರಿ, ಪ್ರಾಯ 45 ವರ್ಷ.
ವಾಸ: ಕಾಕ್ರಾಡಿ ವೈಲು ನೆಲ್ಯಾಡಿ ಅಂಚೆ, ಪುತ್ತೂರು ತಾಲ್ಲೂಕು.
2) ಶಾಖಾ ಅಧಿಕಾರಿ, ಶ್ರೀರಾಮ್ ಜನರಲ್ ಇನ್ಸೂರೆನ್ಸ್ ಕಂಪನಿ 10003ಇ-8ಆರ್11 ಸಿಒ ಇಂಡಸ್ಟ್ರೀಯಲ್ ಏರಿಯಾ, ಸೀತಾಪುರ, ರಾಜಸ್ಥಾನ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ರುಖ್ಸಿ ಇವರು ತಮ್ಮ ಗಂಡನಾದ ಶ್ರೀ ದಿವಂಗತ ರಹೀಂ @ ರಹೀಮಾನ್ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:19.12.2010 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು, ದಕ್ಷಿಣ
ಕನ್ನಡ ಉಪವಿಭಾಗ–2, ಮಂಗಳೂರು.

ಪಿ.ಆರ್.523

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ ಕೋಲಾರ**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್.ಸಿ–07/2007**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1) M. Nazeer S/o Mohamed Sab<br>2) S. Sayeeda W/o M. Nazeer<br>R/o B-267, Noogal Bande,<br>Mulbagal Town, Kolar District. | V/s | 1) S. Mahendra Kumar S/o A. Shankar<br>No.14081 K-2,<br>Navagraha Temple Street, Mysore.<br>2) The National Insurance Co.Ltd.,<br>Mysore Branch Office. (602403) 371/A 3rd Floor,<br>Prestige Shoping Archad Ramswamy Circle,<br>Mysore-570024. |

**ಅಧಿಸೂಚನೆ**

ಅರ್ಜಿದಾರರಾದ M. Nazeer ಇವರು ತಮ್ಮ ಮಗ Wasim Pasha ಇವರು 1ನೇ ಪ್ರತಿವಾದಿ S. Mahendra Kumar ರವರ ಬಳಿ ಕ್ಲೀನರ್ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ:15.12.2006 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:30.03.2010 ರಂದು ನೀಡಲಾಗಿದೆ.

**ಎಸ್. ರೇವಣ್ಣ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಕೋಲಾರ ಉಪವಿಭಾಗ, ಕೋಲಾರ.

ಪಿ.ಆರ್.561

**ಸಹಾಯಕ ಕಾರ್ಮಿಕ ಅಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ**
**ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–4, ಬೆಂಗಳೂರು**
**ಸಂಖ್ಯೆ: ಎಎಲ್‌ಸಿ–4/ಪಿಜಿಎ/ಎಸ್.ಆರ್–26/2009–10**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| ಶ್ರೀಮತಿ ಶಾಂತಮ್ಮ ಕೋಂ ಲೇಟ್ ಪಿ. ಈಶ್ವರ್ ಕೇರಾಫ್ ಇ. ರಮೇಶ್ ನಾಯಕ್, ಮನೆ ನಂ.792, 3ನೇ ಕ್ರಾಸ್ ವಿಜಯಲಕ್ಷ್ಮಿ ಲೇಔಟ್, ಬಾಗಲುಗುಂಟೆ, ಬೆಂಗಳೂರು–73. | **ವಿರುದ್ಧ** | ವಿಭಾಗೀಯ ನಿಯಂತ್ರಕರು ಕೆ.ಎಸ್.ಆರ್.ಟಿ.ಸಿ. ಬೆಂಗಳೂರು ಕೇಂದ್ರಿಯ ವಿಭಾಗ, ಕೆ.ಹೆಚ್. ರಸ್ತೆ, ಶಾಂತಿನಗರ, ಬೆಂಗಳೂರು–27. |

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರು ಈ ನ್ಯಾಯಾಲಯದಲ್ಲಿ ದಿನಾಂಕ:24.06.2008ರಂದು ಉಪಧನ ಪಾವತಿ ಕಾಯ್ದೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅರ್ಜಿಯಲ್ಲಿ ಅವರ ಪತಿ ಪಿ. ಈಶ್ವರ್, ಇವರು ಪ್ರತಿವಾದಿ ಸಂಸ್ಥೆಯಲ್ಲಿ 32 ವರ್ಷಗಳ ಸೇವೆ ಸಲ್ಲಿಸಿ ದಿನಾಂಕ:31.03.1996 ರಂದು ಸೇವೆಯಿಂದ ನಿವೃತ್ತರಾಗಿ ತದನಂತರ, ದಿನಾಂಕ:16.01.2002 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ರೀತ್ಯ ಬರಬೇಕಾದ ಉಪಧನವನ್ನು ಮೃತರ ವಾರಸುದಾರರಾದ ತಮಗೆ ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ.

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಹೆಚ್. ಉಮೇಶ**
ಸಹಾಯಕ ಕಾರ್ಮಿಕ ಆಯುಕ್ತರು, ಮತ್ತು
ನಿಯಂತ್ರಣಾಧಿಕಾರಿಗಳು, ಉಪಧನ ಪಾವತಿ
ಕಾಯ್ದೆ, ವಿಭಾಗ–4, ಬೆಂಗಳೂರು.

ಪಿ.ಆರ್.576

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**
**ಸಂಖ್ಯೆ: ಕಾನಪ/ಡಬ್ಲ್ಯೂಸಿಎ/ಸಿಆರ್–10/2010, ದಿನಾಂಕ:31ನೇ ಮಾರ್ಚ್, 2010**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| 1) ಶ್ರೀಮತಿ ಮಹೇಶ್ವರಿ ಕೋಂ ಎನ್. ವೆಂಕಟೇಶ್, ಅಣ್ಣಾನಗರ ಮೈನ್ ರಸ್ತೆ, ಶಿವಮೊಗ್ಗ. | 1) ಎನ್. ವೆಂಕಟೇಶ್ ಬಿನ್ ನಾರಾಯಣಸ್ವಾಮಿ ಟ್ರಾಕ್ಟರ್ ಸಂಖ್ಯೆ: ಕೆಎ–16/ಟಿ–3539ರ ಮಾಲೀಕರು ಮಂಜುನಾಥ ನಿಲಯ, ಕ್ಲಿನಿಕ್ ಅಶ್ವಿನಿ ಎದುರು, ಅಣ್ಣಾನಗರ ಮೈನ್ ರಸ್ತೆ, ಶಿವಮೊಗ್ಗ.<br>2) ದಿ ಬ್ರಾಂಚ್ ಮ್ಯಾನೇಜರ್, ಮೆ: ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ., ನೆಹರು ರಸ್ತೆ, ಶಿವಮೊಗ್ಗ. |

**ಅಧಿಸೂಚನೆ**

ಅರ್ಜಿದಾರರು ಶಶಿಕುಮಾರ್ ಇವರು ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತನಾಗಿದ್ದಾಗ, ದಿನಾಂಕ:15.04.2010 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಪಿ. ವಿಜಯದೇವ ನಾಯ್ಕ್**
ಕಾರ್ಮಿಕ ಪರಿಹಾರ ಆಯುಕ್ತರು ಕಾರ್ಮಿಕ ಪರಿಹಾರ
ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಸಂಖ್ಯೆ: ಕಾನಪ/ಡಬ್ಲ್ಯೂಸಿಎ/ಸಿಆರ್–12/2010, ದಿನಾಂಕ:31ನೇ ಮಾರ್ಚ್, 2010**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| ಮಹದೇವಮ್ಮ ಕೋಂ ಲೇಟ್ ಚಿಕ್ಕ ಮಾದ,<br>7ನೇ ಕ್ರಾಸ್, ಹರಿಗೆ, ವಿದ್ಯಾನಗರ, ಶಿವಮೊಗ್ಗ.<br>1) ಶೋಭ ಸಿ.<br>2) ಕಿರಣ್ ಸಿ. | ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ (ವಿ),<br>ಪರಿವರ್ತಕ ದುರಸ್ತಿ ಉಪವಿಭಾಗ, ಮೆಸ್ಕಾಂ, ಶಿವಮೊಗ್ಗ. |

**ಅಧಿಸೂಚನೆ**

ಅರ್ಜಿದಾರರು ಮಹದೇವಮ್ಮ ಮತ್ತು ಇತರರು ಇವರು ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತನಾಗಿದ್ದಾಗ, ದಿನಾಂಕ:13.01.2010 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಪಿ. ವಿಜಯದೇವ ನಾಯ್ಕ್**
ಕಾರ್ಮಿಕ ಪರಿಹಾರ ಆಯುಕ್ತರು ಕಾರ್ಮಿಕ ಪರಿಹಾರ
ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಸಂಖ್ಯೆ: ಕಾನಪ/ಡಬ್ಲ್ಯೂಸಿಎ/ಸಿಆರ್–13/2010, ದಿನಾಂಕ:31ನೇ ಮಾರ್ಚ್, 2010**

| **ಅರ್ಜಿದಾರರು** | **ಪ್ರತಿವಾದಿಗಳು** |
|---|---|
| 1) ಶ್ರೀಮತಿ ನೇತ್ರಾ ಕೋಂ ದಿ: ಗೋವಿಂದ<br>2) ಕು: ಸಮಂಜನಾ ಬಿನ್ ದಿ: ಗೋವಿಂದ<br>3) ಸಣ್ಣಮ್ಮ ಕೋಂ ದಿ: ನಂಜುಂಡ,<br>ವಾಸ: ರಂಗನಾಥಪುರ, ಹೆಚ್.ಕೆ. ಜಂಕ್ಷನ್,<br>ಭದ್ರಾವತಿ ತಾಲ್ಲೂಕು. | 1) ಹನುಮಂತಪ್ಪ ಬಿನ್ ಶೆಟ್ಟಿಯ ಬೋವಿ, ಮಾಲೀಕರು<br>ಟ್ರಾಕ್ಟರ್ ಸಂಖ್ಯೆ: ಕೆ–14–ಟಿ–895–96ರ ಮಾಲೀಕರು,<br>ಹುಣಸೆಕಟ್ಟೆ, ಭದ್ರಾವತಿ ತಾಲ್ಲೂಕು.<br>2) ಹೆಚ್.ಆರ್. ಮಂಜುನಾಥ ಬಿನ್ ಲೇಟ್ ರಾಮಚಂದ್ರ<br>ಟ್ರಾಕ್ಟರ್ ಡ್ರೈವರ್, ಹಗಲೆಮನೆ, ಭದ್ರಾವತಿ ತಾಲ್ಲೂಕು.<br>3) ರಾಯಲ್ ಸುಂದರಂ ಅಲಿಯನ್ಸ್ ಇನ್ಸೂರೆನ್ಸ್ ಕಂ.ಲಿ.,<br>ಚೆನ್ನೈ. |

**ಅಧಿಸೂಚನೆ**

ಅರ್ಜಿದಾರರು ನಂಜುಂಡ ಇವರು ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತನಾಗಿದ್ದಾಗ, ದಿನಾಂಕ:09.08.2009 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಪಿ. ವಿಜಯದೇವ ನಾಯ್ಕ್**
ಕಾರ್ಮಿಕ ಪರಿಹಾರ ಆಯುಕ್ತರು ಕಾರ್ಮಿಕ ಪರಿಹಾರ
ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಸಂಖ್ಯೆ: ಕಾನಪ/ಡಬ್ಲ್ಯೂಸಿಎ/ಸಿಆರ್–14/2010, ದಿನಾಂಕ:31ನೇ ಮಾರ್ಚ್, 2010**

**ಅರ್ಜಿದಾರರು**

1) ಶ್ರೀ ಕುಮಾರ್ ಬಿನ್ ಕುಂಜಪ್ಪ

2) ಶ್ರೀಮತಿ ಶಾಂತಮ್ಮ ಕೋಂ ಕುಮಾರ್,

ಇವರಿಬ್ಬರ ವಾಸ: ರಂಗನಾಥಪುರ, ಭದ್ರಾವತಿ ತಾಲ್ಲೂಕು.

**ಪ್ರತಿವಾದಿಗಳು**

1) ಹನುಮಂತಪ್ಪ ಬಿನ್ ಶೆಟ್ಟಿಯ ಬೋವಿ, ಮಾಲೀಕರು ಟ್ರಾಕ್ಟರ್ ಸಂಖ್ಯೆ: ಕೆ–14–ಟಿ–895–96ರ ಮಾಲೀಕರು, ಹುಣಸೆಕಟ್ಟೆ, ಭದ್ರಾವತಿ ತಾಲ್ಲೂಕು.

2) ಹೆಚ್.ಆರ್. ಮಂಜುನಾಥ ಬಿನ್ ಲೇಟ್ ರಾಮಚಂದ್ರ ಟ್ರಾಕ್ಟರ್ ಡ್ರೈವರ್, ಹಗಲೆಮನೆ, ಭದ್ರಾವತಿ ತಾಲ್ಲೂಕು.

3) ರಾಯಲ್ ಸುಂದರಂ ಅಲಿಯನ್ಸ್ ಇನ್ಸೂರೆನ್ಸ್ ಕಂ.ಲಿ., ಚೆನ್ನೈ.

**ಅಧಿಸೂಚನೆ**

ಅರ್ಜಿದಾರರು ವಿಜಯ್‌ಕುಮಾರ್ ಇವರು ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತನಾಗಿದ್ದಾಗ, ದಿನಾಂಕ:09.08.2009 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಪಿ. ವಿಜಯದೇವ ನಾಯ್ಕ್**

ಪಿ.ಆರ್.589

ಕಾರ್ಮಿಕ ಪರಿಹಾರ ಆಯುಕ್ತರು ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ.

**IN THE COURT OF COMMISSIONER FOR WORKMEN'S COMPENSATION BIDAR**

**No.LOB/WCA/Cr-F-16/2010**

**Applicants:**

1) Surekha W/o Dattu Akade Age: about 40 yrs, Occu:Household R/o Village Korali Tq: Neelanga Dist: Osmanabad (MS), Now at Taj colony, Basvakalyan Dist. Bidar and 3 others.

**V/s**

**Respondents:**

1) Jamsheed Khan S/o fareed Khan , Age:Major, Occu: Business R/o Rajeshwer Tq: Basavakalyan Dist: Bidar.

2) The Manager, Sriram Gen. Insurance Co. Ltd., Sitapur Tq: Jaipur, Rajasthan-302022.

**PROCLAIMATION**

Sri/ Smt. Surekha W/o Dattu Akade R/o Village Korali Tq: Neelanga Dist. Osmanabad (MS) Now at Taj Colony, Basavakalyan Dist. Bidar. have/ has filed application in this court claiming compensation stating that Late: Dattu was working as Cleaner Under the Respondent No I he met with an accident arising out of and during the course of employment as a result he died on 26th September, 2009.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this

